# ಮುನ್ನುಡಿ



"ಸಹಕಾರ"ವೆಂಬ ಈ ಚಿಕ್ಕ ನಾಟಕಕ್ಕೆ ಮುನ್ನುಡಿಯನ್ನು ಬರೆಯುವುದಕ್ಕೆ ನನಗೆ ಸಂತೋಷವೆನಿಸುತ್ತದೆ. "ಸಹಕಾರ"ವೆಂಬುದೊಂದು ಸಮಾಜ ಸುಧಾರಣೆಯ ತತ್ತ್ವವು. ಭರತಖಂಡದಂತಹ ದರಿದ್ರ ನಾರಾಯಣನು ವಸತಿ ಮಾಡಿಕೊಂಡಿರುವ ದೇಶಕ್ಕೆ ಈ ತತ್ತ್ವವು ಬಹಳ ಲಾಭಕರವಾಗುವಂತಹದೆನ್ನಲು ಅಡ್ಡಿಯಿಲ್ಲ. ಶ್ರೀಮಂತರ ಹಾಗೂ ಬಡವರೊಳಗಿನ ಅಂತರವನ್ನು ಹೋಗಲಾಡಿಸಲಿಕ್ಕೆಂದು ಅನೇಕ ತತ್ತ್ವಗಳನ್ನು ಬೇರೆಬೇರೆ ನಾಡುಗಳಲ್ಲಿ ಪ್ರತಿಪಾದನ ಮಾಡಿದ್ದಾರೆ. ಅವುಗಳಲ್ಲಿ ಹಲವು ಕ್ರಾಂತಿಕಾರಕವಾದುವು; ಸಮಾಜದ ರಚನೆಯನ್ನೇ ಬುಡಮೇಲು ಮಾಡಲು ಬಗೆಯುವಂತಹವು. ಅಂತಹ ತತ್ತ್ವಗಳು ನಮ್ಮ ನಾಡಿನಲ್ಲಿಯೂ ಪ್ರಚಾರಗೊಳ್ಳಲಾರಂಭಿಸಿವೆ. ಆದರೆ ಸಹಕಾರ ತತ್ತ್ವವು ಕ್ರಾಂತಿಯ ಗೊಂದಲವಿಲ್ಲದೆ ಬಡವರ, ಅವರಲ್ಲಿಯೂ ಒಕ್ಕಲಿಗರ, ಚಿಕ್ಕ ಚಿಕ್ಕ ವ್ಯವಸಾಯಗಳನ್ನು ಮಾಡುವವರ, ಸ್ಥಿತಿಯನ್ನು ಸುಧಾರಿಸಲು ಅನುಕೂಲವಾಗಿದೆ.

ಸರಕಾರದ ಒತ್ತಾಯದಿಂದಲೇ ಆಗಲೊಲ್ಲದೇಕೆ, ಈ ತತ್ತ್ವವು ಭರತಖಂಡದಲ್ಲಿ ಚೆನ್ನಾಗಿ ಬೇರೂರಿದೆ. ಇದರ ಉಪಯೋಗವು ಎಲ್ಲ ಕಡೆಗೂ ಸರಿಯಾಗಿ ಆಗದೆ ಇದ್ದರೆ, ಅದು ಈ ತತ್ತ್ವದ ತಪ್ಪಲ್ಲ; ಅಥವಾ ತತ್ತ್ವವೇ ತಪ್ಪಾದುದೆಂತಲ್ಲ. ಅದು ನಮ್ಮ ಸಮಾಜದಲ್ಲಿದ್ದ ಅಜ್ಞಾನದ, ಅದರ ಲಾಭವನ್ನು ತೆಗೆದು ಕೊಳ್ಳಲು ಯಾವಾಗಲೂ ಕಾಯ್ದುಕೊಂಡಿದ್ದ ಸ್ವಾರ್ಥದ, ಪರಿಣಾಮವೆಂದೇ ಹೇಳಬೇಕು. ಇದಕ್ಕೆ ಒಂದೇ ಹಾದಿ. ಹೆಚ್ಚಿಗೆ ಶಿಕ್ಷಣ! ಇನ್ನೂ ಹೆಚ್ಚಿಗೆ ಶಿಕ್ಷಣ!! ಮತ್ತೂ ಶಿಕ್ಷಣ!!!

# ಭಕ್ತಿ ಸೂ[illegible]ಗಳು

(ನಾರದ ಶಾಂಡಿಲ್ಯ ಕೃ

ಅನುವಾದಕರು :

ರಂಗನಾಥ ದಿವಾಕರ

೨ನೇ ಆವೃತ್ತಿ : ೧೯೫೦

ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ

ಬೆಲೆ: ೦-೧೦-೦

# ಅನುಕ್ರಮಣಿಕೆ



# ಮುನ್ನುಡಿ

## ೨ನೆ ಆವೃತ್ತಿ

ಸುಮಾರು ಹತ್ತು ವರುಷಗಳ ನಂತರ ಈ ಭಕ್ತಿಸೂತ್ರಗಳ ಎರಡನೆ ಆವೃತ್ತಿಯನ್ನು ಹೊರಡಿಸುವ ಪ್ರಸಂಗವು ಬಂದಿದೆ. ಭಕ್ತಿಮಾರ್ಗದ ಅಭ್ಯಾಸದ ದೃಷ್ಟಿಯಿಂದ ಈ ಸೂತ್ರಗಳು ಬಹಳ ಮಹತ್ವದವುಗಳು. ಮೇಲಾಗಿ ಇವು ಮೂಲಭೂತವಾದವ ಗಳೆಂದೂ ಹೇಳಬಹುದು. ಭಗವದ್ಗೀತೆ, ಭಾಗವತ ಮುಂತಾದ ಗ್ರಂಥಗಳಲ್ಲಿ ಭಕ್ತಿಯ ವರ್ಣನೆ ಅಲ್ಲಲ್ಲಿ ಅನೇಕ ಕಡೆಗೆ ಬಂದಿದ್ದರೂ ಶಾಸ್ತ್ರೋಕ್ತವಾಗಿ ಸೂತ್ರರೂಪವಾಗಿ ಅದರ ವಿವೇಚನೆ ಎಲ್ಲಿಯೂ ಕಂಡುಬರುವದಿಲ್ಲ. ಆದುದರಿಂದ ಈ ಸೂತ್ರಗಳು ಬಹಳ ಸಂಗ್ರಾಹ್ಯವಾದವುಗಳೂ ಅಭ್ಯಸನೀಯುವಾದವುಗಳೂ ಇರುವವು.

ಭಕ್ತಿಮಾರ್ಗವು ಆತ್ಯಂತಿಕ ಸುಖದ ಅತ್ಯಂತ ಸುಲಭ ಸಾಧನವೆಂದು ಹೇಳಲಾಗುವದು. ಇಲ್ಲಿ ಸೂತ್ರಕಾರರು ಭಕ್ತಿ ಕೇವಲ ಸಾಧನವಲ್ಲ, ಅದು ಫಲಸ್ವರೂಪವು ಎಂದು ಪ್ರತಿಪಾದಿಸಿರುವರು. ಅರ್ಥಾತ್ ಭಕ್ತಿಮಾರ್ಗದ ಕೊನೆ ಮುಟ್ಟುವವರಿಗೆ ಮಾತ್ರ ಇಷ್ಟಸಿದ್ಧಿಯಾಗುವದು, ಎಂದು ಯಾರೂ ತಿಳಿಯಕೂಡದೆಂದೂ ಭಕ್ತಿಮಾರ್ಗದಲ್ಲಿ ಅಡಿಯಿಟ್ಟೊಡನೆ 'ಅಂತರಾರಾಮ' ದ ಅನುಭವವಾಗುವುದೆಂದೂ ಸೂತ್ರಕಾರರು ಹೇಳುವರು. ಈ ಮಧುರ ಮಾರ್ಗದ ಅನುಭವವೆ ಸಾಧಕರ ಮನವರಿಕೆ ಮಾಡಿ ಕೊಡಬಲ್ಲದು. ನನ್ನಂಥವನು ಈ ವಿಷಯದಲ್ಲಿ ಏನು ತಾನೆ ಹೇಳಬಲ್ಲೆ ?

ನವದಿಲ್ಲಿ
೧—೬—೪೯ } ರಂಗನಾಥ ದಿವಾಕರ

# ಮುನ್ನುಡಿ

## ೧ನೆಯ ಆವೃತ್ತಿ

ನಾರದ ಹಾಗೂ ಶಾಂಡಿಲ್ಯ ಮುನಿಗಳ ಭಕ್ತಿಸೂತ್ರಗಳನ್ನು ಕನ್ನಡಿಸಿ ಈಗ ಅವುಗಳನ್ನು ಪ್ರಕಟಿಸುತಲಿದ್ದೇನೆ.

ಭಕ್ತಿರಹಸ್ಯ, ಭಕ್ತಿಯೋಗ, ಅಥವಾ ಭಕ್ತಿಮಾರ್ಗ ಇವ ಗಳನ್ನು ನಿರೂಪಿಸುವ ಒಂದು ಗ್ರಂಥವನ್ನು 'ಹರಿಭಕ್ತಿ ಸುಧೆ'ಗೆ ಜೊತೆ ಗ್ರಂಥವನ್ನಾಗಿ ಬರೆದು ಪ್ರಕಟಿಸಬೇಕೆಂದು ಮನಸ್ಸಿ ನಲ್ಲಿದೆ. ಆ ವಿಚಾರವನ್ನು ಹರಿಭಕ್ತಿ ಸುಧೆಯ ಪ್ರಸ್ತಾವನೆ ಯಲ್ಲಿ ಕಾಣಿಸಿದ್ದೇನೆ. ಈಗ ಆ ಗ್ರಂಥವನ್ನು ಬರೆಯಲು ಸಾಕಷ್ಟು ಅವಕಾಶ, ಆದಕ್ಕೆ ಆವಶ್ಯವಿದ್ದ ಸಹಾಯ ಸಲಕರಣೆ ಗಳು ಇನ್ನೂ ನನಗೆ ಒದಗಿಲ್ಲವೆಂದು ಬಹಳ ದುಃಖದಿಂದ ಹೇಳಬೇಕಾಗಿದೆ.

ಆದರೆ ಅದನ್ನು ಬರೆಯುವದಕ್ಕೆ ಪೂರ್ವಭಾವಿಯಾಗಿ ಹಲವು ಗ್ರಂಥಗಳನ್ನು ಪರಿಶೀಲಿಸುವದು ಅವಶ್ಯವೆಂದು ಕಂಡು ಬಂದುದರಿಂದ ನಾನು ಈ ಭಕ್ತಿಸೂತ್ರಗಳನ್ನು ಓದಲಾರಂಭಿಸಿ ದೆನು. ಈ ಸೂತ್ರಗಳು ಭಕ್ತಿಮಾರ್ಗಕ್ಕೆ ಬಹಳ ಮುಖ್ಯ ವಾಗಿರುವುದರಿಂದ ಹಾಗೂ ಇನ್ನೂ ಕನ್ನಡದಲ್ಲಿ ಪುಸ್ತಕರೂಪ ದಿಂದ ಪ್ರಕಟವಾದುದನ್ನು ನಾನು ನೋಡದೆ ಇದ್ದುದರಿಂದ ಅವುಗಳನ್ನು ಕನ್ನಡಿಸಿ ಪ್ರಕಟಿಸಬೇಕೆಂಬ ವಿಚಾರವು ನನಗೆ ಹೊಳೆಯಿತು. ಆ ವಿಚಾರದ ಫಲವಿದು.

ಈ ಚಿಕ್ಕ ಪುಸ್ತಕದಲ್ಲಿ ಆ ಸೂತ್ರಗಳ ಮೂಲ, ಅವುಗಳ ಸುಲಭ ಅನುವಾದ ಇವೇ ಮುಖ್ಯವಾದವುಗಳು. ಅಭ್ಯಾಸಿಗಳಿಗೆ ಆ ಅನುವಾದವು ಚನ್ನಾಗಿ ತಿಳಿಯಬೇಕೆಂಬ ಉದ್ದೇಶದಿಂದ

ಆ ಸೂತ್ರಗಳ ಸಾರಾಂಶವನ್ನು ಮೊದಲೇ ಕೊಟ್ಟಿದ್ದೇನೆ. ಕೊನೆಗೆ ಸೂತ್ರಗಳ ಅಕ್ಷರದ ಕ್ರಮವನ್ನಾದರೂ ಕೊಟ್ಟಿದ್ದೇನೆ.

ವೇದೋಪನಿಷತ್ತುಗಳ ಆಧಾರದಿಂದ ಅಥವಾ ಅವುಗಳ ಪ್ರೇರಣೆಯಿಂದ ಬರೆಯಲಾದ ಪಾಂಚರಾತ್ರಾಗಮವೆ ಭಾಗವ ತೋಕ್ತ ಭಕ್ತಿಮಾರ್ಗಕ್ಕೆ ಮುಖ್ಯಾಧಾರವೆಂದು ಹೇಳಬಹುದು. ಆ ಪಾಂಚರಾತ್ರಾಗಮಗಳಲ್ಲಿ ಹೇಳಲಾದ ತತ್ವಗಳನ್ನೆ ಸೂತ್ರೀ ಕರಿಸಿ ಸಂಕ್ಷೇಪದಲ್ಲಿ ನಾರದ ಶಾಂಡಿಲ್ಯರು ಇಲ್ಲಿ ಹೇಳಿರುವರು ಆದುದರಿಂದ ಈ ಸೂತ್ರಗಳು ಬಹಳ ಮಹತ್ವವುಳ್ಳವುಗಳ ಎಂದು ಹೇಳಬಹುದು.

ವೇದಾದಿಗಳಲ್ಲಿ ಭಕ್ತಿಮಾರ್ಗವು ಉಕ್ತವಿಲ್ಲ ಎಂದು ಹೇ ವರು ಹೇಳುವದುಂಟು. ಆದರೆ ಅದು ಸೂಕ್ತವಲ್ಲ. ಈಶಾ ವಾಸ್ಯೋಪನಿಷತ್ತಿನಲ್ಲಿಯು, 'ಈ ವಿಶ್ವವೆಲ್ಲ ಈಶನ ವಾಸ ಸ್ಥಾನವು, ಅವನು ಕೊಟ್ಟುದನ್ನು ಮಾತ್ರ ಭೋಗಿಸಬೇಕು' ಈ ಪ್ರಥಮ ವಾಕ್ಯಗಳು ಭಕ್ತಿಮಾರ್ಗದ ತಿರುಳಲ್ಲದೆ ಮತ್ತಿ ನ್ನೇನು? ಹೀಗಿರುವಾಗ ಭಕ್ತಿಮಾರ್ಗವೆಂಬುದು ಮೊದಲ ಇರಲಿಲ್ಲ ಎಂದು ಹೇಳುವದು ಅಜ್ಞಾನದ ಕುರುಹೆಂದು ನಿಷ್ಕರ್ ವಾಗಿ ಹೇಳಬೇಕಾಗುವದು. ಇನ್ನು ಒಂದು ಮಾತು ನಿಜ. ಅದೇನೆಂದರೆ ಭಕ್ತಿಮಾರ್ಗದ ವಿಕಾಸವು ಮುಂದೆ ಪುರಾಣ ಕಾಲದಲ್ಲಿಯೇ ಹೆಚ್ಚು ಆಯಿತು. ಪರಮಾತ್ಮನು ಮನುಷ್ಯ ದೇಹಧಾರಿಯಾಗಿ ಅವತರಿಸುವನೆಂಬ ಕಲ್ಪನೆ ರೂಢವಾಗಿ ಇಂಥ ಅವತಾರಗಳ ಸ್ಮರಣಸಂಕೀರ್ತನಾದಿ ಪ್ರಚಾರದಲ್ಲಿ ಬಂದ ಬಳಿಕವೆ ಭಕ್ತಿಮಾರ್ಗವು ಜನಸಾಮಾನ್ಯರ ಧರ್ಮವಾಗಿ ಅತ್ಯಂತ ಲೋಕಪ್ರಿಯವಾಯಿತು.

ಇಲ್ಲಿ ಪ್ರಕಟಿಸಿದ ಸೂತ್ರಗಳಲ್ಲಿ ನಾರದ ಸೂತ್ರಗಳು ೮೪ ಹಾಗೂ ಶಾಂಡಿಲ್ಯ ಸೂತ್ರಗಳು ೧೧೦ ಹೀಗೆ ೧೯೪. ೧೯೪ಳ

ಸೂತ್ರ ಇರುವವು. ನಾರದ ಸೂತ್ರಗಳು ಬಹಳ ಸುಲಭವಾದವು ಗಳು. ಭಕ್ತಿಯೆಂಬುದೊಂದು ಭಾವ. ಈ ದೃಷ್ಟಿಯಿಂದಲೆ ಽ ಸೂತ್ರಗಳಲ್ಲಿ ಭಕ್ತಿಯ ವರ್ಣನೆ ಮುಂತಾದವುಗಳು ಇವೆ. ಶಾಂಡಿಲ್ಯ ಸೂತ್ರಗಳು ಸ್ವಲ್ಪ ಕ್ಲಿಷ್ಟವಿದ್ದು ಅವುಗಳಲ್ಲಿ ಭಕ್ತಿಯ ತಾರ್ಕಿಕ ತತ್ವವಿವೇಚನೆಯೂ ಇದೆ. ಜೀವ ಜಗತ್ ಈಶ್ವರ ಸಂಬಂಧ ಮುಂತಾದ ವಿಷಯಗಳೂ ಅದರಲ್ಲಿ ಅಡಕವಾಗಿವೆ. ಆದುದರಿಂದ ಒಂದು ರೀತಿ ಈ ಎರಡೂ ಸೂತ್ರಗ್ರಂಥಗಳು ಪರಸ್ಪರ ಪೋಷಕವೆಂದು ಹೇಳಬಲ್ಲೆನು. ಈ ಸೂತ್ರಗಳು ಪಾಂಚರಾತ್ರ, ಭಾಗವತ, ಭಗವದ್ಗೀತೆ ಮುಂತಾದ ಗ್ರಂಥ ಗಳನ್ನು ಕಣ್ಣು ಮುಂದೆ ಇಟ್ಟುಕೊಂಡೇ ಬರೆದವುಗಳೆಂಬುದಕ್ಕೆ ಯಾವ ಸಂಶಯವೂ ಇಲ್ಲ. ಭಗವದ್ಗೀತೆಯಂತೂ ಸೂತ್ರಗಳ ತಳಹದಿ ಎಂದು ಹೇಳುವಂತಿದೆ. ಗೀತಾಸಂದರ್ಭಗಳು ಅಲ್ಲಲ್ಲಿ ಹೇರಳವಾಗಿವೆ ಎಂಬುದು ಎಲ್ಲರಿಗೂ ಒಡೆದು ಕಾಣುವಂತಿದೆ. ಹಲವು ಸೂತ್ರಗಳು ಗೀತಾವಾಕ್ಯಗಳಿಗೆ ಬರೆದ ಟೀಕೆಯಂತೆ ಕಂಗೊಳಿಸುವವು. ಹೀಗಿರುವುದರಿಂದ ಈ ಸೂತ್ರಗಳು ಈ ಎಲ್ಲ ಗ್ರಂಥಗಳ ನಂತರ ಬರೆದವುಗಳೆಂದು ಬೇರೆ ಹೇಳುವದವಶ್ಯವಿಲ್ಲ.

ಇನ್ನು ಇಲ್ಲಿ ಈ ಭಕ್ತಿಸೂತ್ರಗಳಲ್ಲಿಯ ಒಂದೆರಡು ವಿಶೇಷ ಗಳನ್ನು ಕಾಣಿಸುವದು ಅನುಚಿತವಾಗಲಿಕ್ಕಿಲ್ಲ. ಭಕ್ತಿಯು ಈ ಸೂತ್ರಗಳ ಮುಖ್ಯ ವಿಷಯವಿರುವದರಿಂದ ಇಲ್ಲಿ ಭಕ್ತಿಗೆ ಎಲ್ಲಕ್ಕೂ ಹೆಚ್ಚು ಪ್ರಾಧಾನ್ಯ ಕೊಡುವದು ಅತ್ಯವಶ್ಯ ಹಾಗೂ ಸ್ವಾಭಾವಿಕ. ಇತರ ಸಾಧನಗಳ ಉಲ್ಲೇಖ ಮಾಡಿ ಅವೆಲ್ಲವು ಗಳಿಗಿಂತ ಇದು ಶ್ರೇಷ್ಠವು ಹಾಗೂ ಉಳಿದವುಗಳು ಕೇವಲ ಸಾಧನೀಭೂತವಾದವುಗಳು ಎಂದು ಈ ಸೂತ್ರಗಳು ಪ್ರತಿ ಪಾದಿಸುವವು. ಭಕ್ತಿಮಾರ್ಗವೆಂಬ ಪ್ರತ್ಯೇಕವಾದ ಸಾಧನ ಮಾರ್ಗವೇ ಇಲ್ಲ ಅದು ಕೇವಲ ಜ್ಞಾನಕ್ಕೆ ಸಾಧಕ ಎಂದು

ಹೇಳುವ ಪಕ್ಷವೊಂದಿದೆ. ಆದರೆ ಆ ಪಕ್ಷದ ಪೂರ್ಣ ನಿರಾಕರಣವು ಇಲ್ಲಿರುವದು. ಇಷ್ಟೇ ಅಲ್ಲ. ಭಕ್ತಿಯು ಸ್ವಯಂ ಫಲದಾಯಿ ಇರುವುದರಿಂದ ಹಾಗೂ ಕೂಡಲೆ ಫಲವನ್ನು ಕೊಡಲಾರಂಭಿಸುತಿರುವುದರಿಂದ ಈ ಮಾರ್ಗದಷ್ಟು ಶ್ರೇಷ್ಠ ಮಾರ್ಗವು ಮತ್ತೊಂದಾವುದೂ ಇಲ್ಲ ಎಂದು ಇಲ್ಲಿ ಪ್ರತಿಪಾದನೆ ಮಾಡಲಾಗಿದೆ.

ಎರಡನೆಯ ವಿಶೇಷವೆಂದರೆ, ಜ್ಞಾನಕಾಂಡ ಅಥವಾ ಬ್ರಹ್ಮ ಕಾಂಡ ಎಂದು ವೇದದ ಯಾವ ಭಾಗಕ್ಕೆ ಹೆಸರಿದೆಯೋ ಅದರ ಪ್ರತಿಪಾದ್ಯ ವಿಷಯವು ಭಕ್ತಿಯೇ ಇರುವದು, ಜ್ಞಾನವಲ್ಲ, ಎಂಬ ಪ್ರತಿಪಾದನವು ಈ ಸೂತ್ರಗಳಲ್ಲಿದೆ. ಭಕ್ತಿಯೆ ಕೊನೆಯ ನಿಷ್ಠೆ, ಜ್ಞಾನವಲ್ಲ ಎಂದು ಸೂತ್ರಕಾರರ ಅಭಿಪ್ರಾಯವಿದ್ದುದು ಸ್ಪಷ್ಟವಿದೆ.

ಮೂರನೆಯ ಸಂಗತಿ ಏನೆಂದರೆ ಈ ಸಂಸಾರದ ಕಾರಣ ವನ್ನು ಹೇಳುವಾಗ ಅಭಕ್ತಿಯೆ ಕಾರಣ, ಅಜ್ಞಾನವು ಅದರ ಕಾರಣವಲ್ಲ ಎಂದು ಈ ಸೂತ್ರಗಳಲ್ಲಿ ಹೇಳಲಾಗಿದೆ. ಅಭಕ್ತಿ ಅಳಿದು ಭಕ್ತಿ ಅಳವಟ್ಟಿತೆಂದರೆ ಮುಕ್ತಿ ಕಟ್ಟಿಟ್ಟಂತೆ. ಅಭಕ್ತಿ ಯಿಂದ ಸಂಸಾರಪ್ರವೃತ್ತಿ, ಭಕ್ತಿಯಿಂದ ಸಂಸಾರನಿವೃತ್ತಿ ಅಥವಾ ಮುಕ್ತಿ ಹೀಗೆ ಇಲ್ಲಿ ಪ್ರತಿಪಾದನವಿರುವದು. ಇದೊಂದು ಈ ಸೂತ್ರಗಳಲ್ಲಿ ಹೇಳಲಾದ ವಿಶೇಷ ಸಂಗತಿ ಎನ್ನಬಹುದು.

ನಾಲ್ಕನೆಯ ಹಾಗೂ ಎಲ್ಲಕ್ಕೂ ಮಹತ್ವದ ಮಾತೆಂದರೆ, ಕೇವಲ ತಾಳ ಬಡಿಯುತ್ತ ಇಲ್ಲವೆ ಜಪಮಾಲೆ ತಿರುವುತ್ತ, ಇಲ್ಲವೆ, ಗೆಜ್ಜೆ ಕಟ್ಟಿ ಕುಣಿಯುತ್ತ ಕೂಡುವುದೆಂದರೆ ಭಕ್ತಿ ಎಂದು ಈ ಸೂತ್ರಗಳು ಹೇಳಿಲ್ಲ. ಲೌಕಿಕ ವೈದಿಕ ವ್ಯವಹಾರ ಗಳನ್ನು ಕೊನೆಯ ವರೆಗೂ ಸರ್ವಾರ್ಪಣಪೂರ್ವಕವಾಗಿ ಮಾಡು

ತ್ತಲೆ ಇರಬೇಕು ಎಂದು ವಿಧಿಪೂರ್ವಕವಾಗಿ ಈ ಸೂತ್ರಗಳು ಹೇಳುವವು. ಅನನ್ಯಭಾವದಿಂದ ಹಾಗೂ ಪರಮಾತ್ಮಪ್ರೇಮ ದಿಂದ ಪ್ರೇರಿತರಾಗಿ ಭಕ್ತಿಭಾವಕ್ಕೆ ಬಾಧೆ ಬರದಂತೆ ಸಕಲ ವ್ಯವ ಹಾರಗಳನ್ನು ಮಾಡುತ್ತಿರುವುದು ಉತ್ತಮ ಭಕ್ತನ ಲಕ್ಷಣ ಎಂದು ಹೇಳಬಹುದು.

ಈ ಸೂತ್ರಗಳಲ್ಲಿ ಭಕ್ತನ ಸಿದ್ಧಸ್ಥಿತಿಯ ವರ್ಣನೆಯೆ ಹೆಚ್ಚಾಗಿದೆ ಎಂದು ಹೇಳಬಹುದು. ಆದರೆ ಪ್ರಾರಂಭದಿಂದ ಕೊನೆವರೆಗೆ ಸಾಧಕನ ಅಂತರ್ಬಾಹ್ಯ ವ್ಯಾಪಾರಗಳಲ್ಲಿ ಯಾವ ರೀತಿ ಬದಲಾವಣೆಗಳು ನಡೆಯುತಿವೆ ಮುಂತಾದ ಸಂಗತಿಗಳು ನಮಗೆ ಈ ಸೂತ್ರಗಳಲ್ಲಿ ದೊರೆಯುವುದಿಲ್ಲ. ಇಲ್ಲಿ ಭಕ್ತನ ಒಂದು 'ಸ್ಥಿತಿಯ' ವರ್ಣನೆ ಇದೆ ಆದರೆ ಅವನ 'ಗತಿಯ' ವರ್ಣನೆ ಇಲ್ಲ ಎಂದು ಹೇಳಬಹುದು. ದಿನ ದಿನಕ್ಕೆ ಅವನ ಮನೋರಚನೆಯಲ್ಲಿ ಹಾಗೂ ಅವನ ಬಾಹ್ಯ ವ್ಯವಹಾರಗಳಲ್ಲಿ ಏನು ಹೆಚ್ಚುಕಡಿಮೆಗಳಾಗುವವು ಎಂಬುದು ಒಳ್ಳೇ ಉದ್ಬೋ ಧಕವಾದ ವಿಷಯವಿದೆ. ಅದನ್ನು ಕುರಿತು ನಾವು ಬೇರೆ ಗ್ರಂಥ ಗಳನ್ನೇ ನೋಡಬೇಕಾಗುವದು.

ಸಂಸ್ಕೃತ ವಾಙ್ಮಯದ ಇತಿಹಾಸದಲ್ಲಿ ಸೂತ್ರಗಳು ಏಕೆ ಹಾಗೂ ಯಾವಾಗ ಬರೆಯಲ್ಪಟ್ಟವು ಎಂಬುದನ್ನು ನೋಡಿದರೆ, ನೆನಪಿಡಲು ಸುಲಭವಾಗಬೇಕು ಎಂಬ ಉದ್ದೇಶದಿಂದ ಸೂತ್ರ ಗಳು ಬರೆಯಲಾಗುತಿದ್ದವು ಎಂಬ ಮಾತು ಸ್ಪಷ್ಟವಿದೆ. ಅದೇ ರೀತಿ ಭಾಷೆ ಸಾಕಷ್ಟು ರೂಪುಗೊಂಡ ಮೇಲೆ ಆಯಾ ಭಾಷೆಯ ವ್ಯಾಕರಣಗಳು ಬರೆಯಲ್ಪಡುವಂತೆ ಆಯಾ ಶಾಸ್ತ್ರ ವಿಷಯವು ಸಾಕಷ್ಟು ಪ್ರೌಢ ಸ್ಥಿತಿಗೆ ಬಂದ ನಂತರವೆ ಆಯಾ ವಿಷಯ ಗಳನ್ನು ಕುರಿತು ಸೂತ್ರಗಳ ರಚನೆಯಾಗುತಿತ್ತು ಎಂದು ಸಾಮಾನ್ಯವಾಗಿ ಹೇಳಬಹುದು. ಒಮ್ಮೆ ಸೂತ್ರಗಳ ರಚನೆ

ಯಾದ ಬಳಿಕ ಆ ಸೂತ್ರಗಳನ್ನು ಕುರಿತು ಟೀಕೆ ಟಿಪ್ಪಣಿ ಬರೆ ಯುವ ಪ್ರವೃತ್ತಿ ಹೆಚ್ಚಾದುದು ಕಂಡುಬರುವುದು ಹೊರತು ಸ್ವತಂತ್ರ ಗ್ರಂಥಗಳನ್ನು ಆ ಬಗ್ಗೆ ಬರೆಯುವ ಪ್ರವೃತ್ತಿ ಕಡಿಮೆ.

ಇದೇ ಮಾತು ಈ ಭಕ್ತಿಸೂತ್ರಗಳನ್ನು ಅನ್ವಯಿಸುವದು ಎಂದು ಹೇಳಬಹುದು.

ಇನ್ನು ನನ್ನ ಭಾಷಾಂತರವನ್ನು ಕುರಿತು ಒಂದೆರಡು ಮಾತು ಹೇಳುವದು ಅವಶ್ಯ. ಆದಷ್ಟು ಭಕ್ತಿಯ ಭಾಷೆಯನ್ನೇ ಉಪಯೋಗಿಸಬೇಕೆಂಬ ಉದ್ದೇಶದಿಂದ ನಾನು ಪರಮಾತ್ಮ, ಈಶ್ವರ ಮುಂತಾದ ಶಬ್ದಗಳನ್ನು ಉಪಯೋಗಿಸದೆ ಭಗವಾನ್ ಎಂಬ ಶಬ್ದವನ್ನೇ ಉಪಯೋಗಿಸುತ್ತ ಬಂದಿರುವೆನು. ( ಭಕ್ತಿ, ಭಕ್ತ ಅಥವಾ ಭಾಗವತ ಮತ್ತು ಭಗವಾನ್ ಇವು ಮೂರು ಭಕ್ತಿಮಾರ್ಗದಲ್ಲಿಯ ' ತ್ರಿಪುಟಿ ' ಎಂದು ಹೇಳಬಹುದು ).

ಈ ಪುಸ್ತಕವನ್ನು ಬರೆಯುವಾಗ ನಾನು ಗೋರಖಪುರದ ಗೀತಾ ಪ್ರೆಸ್ಸಿನವರು ಪ್ರಕಟಿಸಿದ ನಾರದ ಭಕ್ತಿಸೂತ್ರಗಳನ್ನೂ ಅಲಹಾಬಾದದ ಪಾಣಿನಿ ಆಫೀಸಿನವರು ಪ್ರಕಟಿಸಿದ ನಾರದ ಶಾಂಡಿಲ್ಯ ಸೂತ್ರಗಳನ್ನು ಆಧಾರವಾಗಿಟ್ಟುಕೊಂಡು ಕನ್ನಡಿ ಸಿದ್ದೇನೆ. ಶಾಂಡಿಲ್ಯ ಸೂತ್ರಗಳಿಗೆ ಸ್ವಪ್ನೇಶ್ವರನೆಂಬವನ ಟೀಕೆಯೂ ಇದೆ.

ಭಕ್ತಿಮಾರ್ಗದ ಅಭ್ಯಾಸಿಗಳಿಗೆ ಈ ಗ್ರಂಥವು ಬಹಳ ಉಪ ಯುಕ್ತವಾಗುವುದೆಂದು ನಾನು ನಂಬಿದ್ದೇನೆ. ಆ ನಂಬಿಗೆ ಯಿಂದ ಈ ಪುಸ್ತಕವನ್ನು ಕರ್ನಾಟಕದ ಭಕ್ತವೃಂದದ ಚರ ಣಾರವಿಂದಗಳಿಗೆ ಅರ್ಪಿಸಿದ್ದೇನೆ.

ಯುಗಾದಿ ಪ್ರತಿಪದೆ
ವಿಕ್ರಮ ಸಂವತ್ಸರ
ಶಾ. ಶಕ ೧೮೬೨

ರಂಗನಾಥ ದಿವಾಕರ

# ನಾರದೀಯ ಭಕ್ತಿಸೂತ್ರಗಳು

## ಸಾರಸರ್ವಸ್ವ

ಇನ್ನು ಭಕ್ತಿಯ ವ್ಯಾಖ್ಯೆಯನ್ನು ಹೇಳುವೆವು, ಎಂದು ಪ್ರಾರಂಭ ಮಾಡಿ ನಾರದ ಮುನಿಗಳು ೮೪ ಭಕ್ತಿಸೂತ್ರಗಳನ್ನು ಬರೆದಿರುವರು. ಒಂದೇ ಪ್ರವಾಹದಲ್ಲಿ ಸಂಕ್ಷಿಪ್ತವಾಗಿ ಆ ಸೂತ್ರಗಳ ಸಾರಸರ್ವಸ್ವವನ್ನು ಮೊದಲು ಕೊಟ್ಟರೆ ಮುಂದೆ ಅವುಗಳ ಅಭ್ಯಾಸ ಮಾಡಲು ಮತ್ತು ಅವುಗಳನ್ನು ಸರಿಯಾಗಿ ತಿಳಿದುಕೊಳ್ಳಲು ಸಹಾಯವಾಗುವದೆಂಬ ಬುದ್ಧಿಯಿಂದ ಅವುಗಳ ಸಾರವು ಕೆಳಗೆ ಕೊಡಲಾಗಿದೆ.

ಭಗವಂತನನ್ನು ಕುರಿತು ಭಕ್ತನು ತಳೆದ ಪರಮ ಪ್ರೇಮವೆ ಭಕ್ತಿಯು. ಅದು ಅಮೃತದಂತೆ ರುಚಿಕರವೂ ಆನಂದ ದಾಯಕವೂ ಇರುವದು. ಯಾವನಲ್ಲಿ ಭಕ್ತಿಯು ಪೂರ್ಣವಾಗಿ ನೆಲೆಗೊಂಡಿದೆಯೊ ಅವನು ಸಿದ್ಧನಾಗುವನು, ಅಮರನಾಗುವನು, ಸಂತೃಪ್ತನಾಗುವನು. ಅವನು ಇಚ್ಛಾದ್ವೇಷಾದಿ ಆವೇಗಗಳಿಂದ ಮುಕ್ತನಾಗುವನು. ಅವನು ಆತ್ಮಸಂತೋಷವನ್ನು ಪಡೆಯುವನು.

ಭಕ್ತಿಯು ನಿಷ್ಕಾಮವಿರುವದು. ಲೌಕಿಕ ವೈದಿಕ ವ್ಯವಹಾರಗಳನ್ನೆಲ್ಲ ಅನಾಸಕ್ತಿಯಿಂದ ಮಾಡುವುದೆ ನಿಷ್ಕಾಮತೆ ಎನಿಸುವದು.

ಭಕ್ತನು ಅನನ್ಯಭಾವದಿಂದ, ಉಳಿದ ಎಲ್ಲ ಅವಲಂಬನ ಗಳನ್ನು ಬಿಟ್ಟು ಕೇವಲ ಭಗವಂತನನ್ನೇ ಆಶ್ರಯಿಸುವನು.

ಭಕ್ತನು ಶಾಸ್ತ್ರವಿಹಿತ ಕರ್ಮ ಮಾಡುವುದನ್ನು ಬಿಡುವುದಿಲ್ಲ. ಹಾಗೆ ಬಿಟ್ಟರೆ ಅವನು ತನ್ನ ಮಾರ್ಗದಿಂದ ಚ್ಯುತನಾಗುವ ಭಯವಿದೆ. ಲೋಕವ್ಯವಹಾರಗಳನ್ನಾದರೂ ಯೋಗ್ಯವಾಗಿ ಮಾಡಲೇಬೇಕು. ಯಾಕಂದರೆ ಸಾಯುವವರೆಗೆ ಭೋಜನಾದಿ ವ್ಯಾಪಾರಗಳು ನಡೆಯತಕ್ಕವುಗಳೇ.

ಭಕ್ತಿಯ ಲಕ್ಷಣಗಳನ್ನು ಬೇರೆ ಬೇರೆ ಮುನಿಗಳು ಬೇರೆ ಬೇರೆ ರೀತಿ ಹೇಳಿರುವರು. ಪೂಜಾದಿಗಳಲ್ಲಿ ಪ್ರೇಮವೆ ಭಕ್ತಿಯ ಲಕ್ಷಣವೆಂದು ವ್ಯಾಸರ ಮತ. ಭಗವತ್ಕೀರ್ತನ ಕಥಾದಿಗಳಲ್ಲಿ ಪ್ರೀತಿ ಇರುವುದೆ ಭಕ್ತಿಲಕ್ಷಣವೆಂದು ಗರ್ಗನ ಮತ. ಸತತ ಆತ್ಮರತಿಯೆ ಭಕ್ತಿ ಎಂದು ಶಾಂಡಿಲ್ಯನ ಮತ. ಸರ್ವಕರ್ಮ ಸಮರ್ಪಣ ಹಾಗೂ ಭಗವಂತನ ವಿರಹದಿಂದ ಅತ್ಯಂತ ವಿಕಲ ನಾಗುವುದೆ ಪರಮ ಭಕ್ತಿಯ ಲಕ್ಷಣ ಎಂದು ನಾರದರ ಅಭಿಪ್ರಾಯ.

ನಾರದರ ಅಭಿಪ್ರಾಯವೆ ಯೋಗ್ಯವು. ಯಾಕಂದರೆ ಗೋಪಿಕಾಭಕ್ತಿಯೆ ಎಲ್ಲಕ್ಕೂ ಹೆಚ್ಚಿನ ಭಕ್ತಿಯು. ಅವರಲ್ಲಿ ಮೇಲ್ಕಾಣಿಸಿದ ಈ ಎರಡೂ ಲಕ್ಷಣಗಳು ಇದ್ದವು. ಅವರಿಗೆ ಭಗವಂತನ ಮಹಾತ್ಮ್ಯ ಜ್ಞಾನವೂ ಇತ್ತು. ಆದುದರಿಂದ ಅದು ಜಾರರ ಪ್ರೇಮವೆನಿಸದು. ಜಾರ ಜಾರಿಣಿಯರ ಪ್ರೀತಿ ಯಲ್ಲಿ ತನ್ನ ಪ್ರೀತಿಪಾತ್ರನಿಗೆ ಆದ ಸುಖವೆ ತನ್ನ ಸೌಖ್ಯ ಎಂಬ ಭಾವವಿರುವುದಿಲ್ಲ. ತನಗೆ ಸುಖವಾಗಬೇಕೆಂಬ ಸ್ವಾರ್ಥವೆ ಅದರಲ್ಲಿ ತುಂಬಿರುವುದು.

ಕರ್ಮ, ಜ್ಞಾನ, ಯೋಗ ಈ ಮೂರಕ್ಕಿಂತಲೂ ಭಕ್ತಿಯು ಹೆಚ್ಚಿನದು. ಯಾಕಂದರೆ ಇದು ಕೇವಲ ಸಾಧನವಲ್ಲ. ಇದು

ಸ್ವಯಂಫಲರೂಪವಿರುವದು. ಇದಲ್ಲದೆ ಭಕ್ತನು ನಿರಭಿಮಾನಿಯೂ ದೀನವೃತ್ತಿಯುವನೂ ಇರುವುದರಿಂದ ಭಗವತ್ಕೃಪೆಯು ಬೇಗನೆ ಆಗುವದು.

ಜ್ಞಾನವೇ ಭಕ್ತಿಯ ಸಾಧನವೆಂದು ಹಲವರ ಮತ. ಅವು ಅನ್ಯೋನ್ಯಾಶ್ರಯದಿಂದ ಸಾಗುವವೆಂದು ಅನ್ಯರ ಮತ. ಆದರೆ ಭಕ್ತಿಯು ಸ್ವಯಂಫಲರೂಪವಿರುವುದರಿಂದ ಅದು ಯಾವ ಅನ್ಯ ಮಾರ್ಗದ ಸಾಧನವೂ ಆಗಲರಿಯದು. ಜ್ಞಾನವು ಸ್ವಯಂಫಲರೂಪವಲ್ಲ. ಉದಾ: ಅರಮನೆಯ ದರ್ಶನವಾದಾಕ್ಷಣಕ್ಕೆ ಅರಸನು ಪ್ರಸನ್ನನಾದಂತಾಗಲಿಲ್ಲ ಅಥವಾ ಮಿಷ್ಟಾನ್ನ ದರ್ಶನವಾದಾಕ್ಷಣಕ್ಕೆ ಹೊಟ್ಟೆ ತುಂಬಿದಂತಾಗಲಿಲ್ಲ. ಆದುದರಿಂದ ಸ್ವಯಂಫಲರೂಪ ಭಕ್ತಿಯನ್ನು ತಳೆಯುವುದೆ ಉತ್ತಮ.

ವಿಷಯತ್ಯಾಗ, ಅನಾಸಕ್ತಿ, ಸತತ ಭಜನ, ಭಗವದ್ಗುಣ ಶ್ರವಣ, ಕೀರ್ತನ ಇವು ವಿವಿಧ ಸಾಧನಗಳೆಂದು ಬೇರೆ ಬೇರೆ ಭಕ್ತಾಚಾರ್ಯರು ಹೇಳುವರು. ಮುಖ್ಯವಾಗಿ ಸಜ್ಜನರ ಕೃಪೆ ಇಲ್ಲವೆ ಭಗವತ್ಕೃಪೆ ಇವೇ ಅವಶ್ಯವಾದವುಗಳು.

ಸತ್ಸಂಗವೆಂಬುದು ಬಹಳ ದುರ್ಲಭವು. ಆದರೆ ಅದು ಅಮೋಘವಾದ ಸಾಧನವು. ಅದಾದರೂ ಭಗವತ್ಕೃಪೆಯಿಂದಲೆ ದೊರೆಯುವುದು. ಸದ್ಭಕ್ತರು ಹಾಗೂ ಭಗವಂತ ಇವರಲ್ಲಿ ಭೇದವೆ ಇಲ್ಲ ಎಂದು ಹೇಳಬಹುದು. ಆದುದರಿಂದ ಸತ್ಸಂಗವನ್ನು ಸಾಧಿಸುವದು ಮುಖ್ಯವಾದ ಕಾರ್ಯವು.

ಸತ್ಸಂಗವು ಎಷ್ಟು ಉಪಕಾರಿಯೋ ಅಷ್ಟೇ ದುಃಸಂಗವು ಅಪಕಾರಿಯು; ಆದುದರಿಂದ ತ್ಯಾಜ್ಯವು. ದುಃಸಂಗದಿಂದ ಮನಸಿನಲ್ಲಿ ಮೋಹಾದಿಗಳು ಹುಟ್ಟಿ ಸರ್ವನಾಶವಾಗುವದು. ನಮ್ಮಲ್ಲಿಯ ಅಲ್ಪ ದೋಷಗಳು ಸಹ ದುಃಸಂಗದಿಂದ ಪ್ರಚಂಡವಾಗಿ ಬೆಳೆದು ನಮ್ಮನ್ನು ದುಃಖಗೊಳಿಸುವವು

ಅನಾಸಕ್ತನಾಗಿ ಸತ್ಸಂಗವನ್ನು ಸಾಧಿಸುವವನು ನಿರ್ಮಮನಾಗುವನು. ಏಕಾಂತಪ್ರಿಯನಾಗಿ ಲೋಕಬಂಧನಗಳನ್ನು ಹರಿದೊಗೆಯುವನು. ತ್ರಿಗುಣಾತೀತನಾಗುವನು. ಚಿಂತಾರಹಿತನಾಗುವನು. ಕರ್ಮಫಲವನ್ನು ಬಿಟ್ಟು ನಿಷ್ಕಾಮದಿಂದ ಕರ್ಮಗಳನ್ನಾಚರಿಸುವನು. ದ್ವಂದ್ವಾತೀತನಾಗುವನು. ಅವನಲ್ಲಿ ಅವಿಚ್ಛಿನ್ನವಾದ ಭಗವತ್ಪ್ರೇಮವು ಉದ್ಭವಿಸುವದು. ಇಂಥ ಭಕ್ತನು ಈ ಮಾಯೆಯನ್ನು ದಾಟಿ ಮುಕ್ತನಾಗುವನು.

ಮುಖ್ಯ ಭಕ್ತಿಯು ಹೇಳಲಿಕ್ಕೆ ಬಾರದಷ್ಟು ಆನಂದದಾಯಕವಿರುವದು. ಅದು ತ್ರಿಗುಣಗಳಾಚೆಗಿನದು, ನಿಷ್ಕಾಮವು, ಪ್ರತಿಕ್ಷಣವೂ ಹೆಚ್ಚಾಗುತ್ತ ಹೋಗುವಂತಹದು, ನಿರಂತರವಿರುವಂತಹದು, ಅತ್ಯಂತ ಸೂಕ್ಷ್ಮವು ಹಾಗೂ ಅನುಭವ ಸ್ವರೂಪವು. ಆ ಭಕ್ತಿ ನೆಲೆಗೊಂಡಿತೆಂದರೆ ಭಗವಂತನ ಹೊರತು ಅನ್ಯ ಯಾವ ವಸ್ತುವೂ ಕಾಣುವುದೇ ಇಲ್ಲ. ಎಲ್ಲವೂ ಭಗವಂತನೇ ಎಂಬ ಪ್ರತೀತಿಯಾಗುವದು.

ಸಾತ್ವಿಕ, ರಾಜಸಿಕ, ತಾಮಸಿಕ ಎಂದು ಅಥವಾ ಆರ್ತ, ಜಿಜ್ಞಾಸು, ಅರ್ಥಾರ್ಥಿ ಎಂದು ಗೌಣೀಭಕ್ತಿಯು ಮೂರುಬಗೆಯಾಗಿರುವದು. ಇವುಗಳಲ್ಲಿ ತಾಮಸಕ್ಕಿಂತ ರಾಜಸ, ರಾಜಸಕ್ಕಿಂತ ಸಾತ್ವಿಕ ಭಕ್ತಿ ಹೆಚ್ಚಿನದು. ಅದೇ ರೀತಿ ಅರ್ಥಾರ್ಥಿಗಿಂತ ಜಿಜ್ಞಾಸು ಭಕ್ತಿ, ಅದಕ್ಕಿಂತ ಆರ್ತಭಕ್ತಿ ಹೆಚ್ಚಿನದು.

ಇತರ ಎಲ್ಲ ಮಾರ್ಗಗಳಿಗಿಂತ ಭಕ್ತಿಮಾರ್ಗವು ಬಹು ಸುಲಭವು. ಯಾಕಂದರೆ ಇದು ಸ್ವಯಂಪ್ರಮಾಣವಿರುವದು, ಶಾಂತಿರೂಪವಿರುವದು, ಪ್ರತ್ಯಕ್ಷ ಪರಮಾನಂದರೂಪವಿರುವದು.

ಲೋಕವ್ಯವಹಾರಾದಿಗಳಲ್ಲಿ ಏನಾದರೂ ತೊಂದರೆಗಳು ಉಂಟಾದರೂ ಭಕ್ತನು ಚಿಂತಿಸಕೂಡದು. ಯಾಕಂದರೆ

ಅವನು ಸರ್ವಾರ್ಪಣಮಾಡಿಬಿಟ್ಟಿರುವನು. ಭಕ್ತಿ ಸಿದ್ಧನು ಕೂಡ ಲೋಕವ್ಯವಹಾರಗಳನ್ನು ಬಿಟ್ಟುಬಿಡಕೂಡದು. ಅನಾಸಕ್ತಿಯನ್ನೂ ತತ್ಸಾಧನವಾದ ನಿಷ್ಕಾಮಕರ್ಮವನ್ನೂ ಅವನು ಮಾಡುತ್ತಲೇ ಇರಬೇಕು.

ಭಕ್ತನಾಗಲಿಚ್ಛಿಸುವವನು ಸ್ತ್ರೀ, ಧನ, ನಾಸ್ತಿಕರು, ವೈರಿಗಳು ಇವರ ಚರಿತ್ರವನ್ನು ಕೇಳಕೂಡದು. ಅವನು ದಂಭಾಭಿಮಾನಾದಿಗಳನ್ನು ಬಿಟ್ಟುಬಿಡತಕ್ಕದ್ದು.

ತನ್ನ ಸರ್ವ ಕರ್ಮಾದಿಗಳನ್ನು ಭಗವಂತನಿಗೆ ಅರ್ಪಿಸಿಬಿಟ್ಟ ಭಕ್ತನು ಕಾಮಕ್ರೋಧಾದಿಗಳನ್ನು ತಾಳುವುದಾದರೂ ಭಗವಂತನ ಬಗ್ಗೆಯೇ ತಾಳಬೇಕು. ನಿತ್ಯವೂ ತಾನು ಭಗವಂತನಲ್ಲಿ ಲಯಹೊಂದುವ ಉದ್ದೇಶದಿಂದ ದಾಸ್ಯ ಇಲ್ಲವೆ ಮಧುರಾ ಭಕ್ತಿಯಿಂದ ಪ್ರೇಮವನ್ನು ಸಾಧಿಸಬೇಕು.

ಏಕಾಂತಿಕರು ಅಥವಾ ಅನನ್ಯ ಭಕ್ತರು ಎಲ್ಲಕ್ಕೂ ಶ್ರೇಷ್ಠರು. ಭಕ್ತಿಭಾವವು ತುಂಬಿ ತುಳುಕಲಾರಂಭಿಸಿತೆಂದರೆ ಭಕ್ತರು ರೋಮಾಂಚಿತರೂ ಆನಂದಾಶ್ರುಪೂರ್ಣರೂ ಆಗುವರು. ಪರಸ್ಪರರಲ್ಲಿ ಅವರು ಅತ್ಯಾನಂದದಿಂದ ಭಗವದ್ಗುಣಾದಿಗಳನ್ನು ಕುರಿತು ಮಾತಾಡುವರು. ಅಂಥವರು ತಮ್ಮ ಕುಲಕೋಟಿಗಳನ್ನೆಲ್ಲ ಉದ್ಧರಿಸುವರು. ತೀರ್ಥಾದಿಗಳು ಅವರಿಂದ ಪಾವನವಾಗುವವು. ಅವರ ಕರ್ಮಗಳೆಲ್ಲ ಸತ್ಕರ್ಮಗಳಾಗುವವು. ಶಾಸ್ತ್ರಗಳಿಗೆ ಅವರಿಂದ ಹೆಚ್ಚು ಮಹತ್ವವು ಉಂಟಾಗುವದು. ಅವರು ಭಗವಂತನಲ್ಲಿ ತನ್ಮಯರಾಗುವರು. ಅವರನ್ನು ನೋಡಿ ಅವರ ಪಿತರರು ಆನಂದಿಸುವರು, ದೇವತೆಗಳು ಕುಣಿಯುವರು, ಈ ಪೃಥಿವಿಗೆ ಅವರಿಂದ ರಕ್ಷಣೆ ದೊರೆಯುವದು.

ಇಷ್ಟೊಂದು ಅವರ ಮಹತ್ವವು. ಸಾಮಾನ್ಯವಾಗಿ ಜಾತಿ, ವಿದ್ಯೆ, ಕುಲ, ರೂಪ, ಧನ, ಕ್ರಿಯೆ ಇವುಗಳ ಅಸಮಾನತೆಯ

ಮೂಲಕ ಉಚ್ಚ ನೀಚ ಭಾವಗಳು ಉಂಟಾಗುವವು. ಆದ
ಭಕ್ತರು ಇವುಗಳನ್ನೆಣಿಸದೆ ಸರ್ವ ಭಕ್ತರೂ ಸಮಾನರೆಂಬ
ಭಾವದಿಂದ ನಡೆಕೊಳ್ಳುವರು. ತಾವೆಲ್ಲರೂ ಭಗವಂತನ
ಮಕ್ಕಳು ಎಂಬ ಭಾವವು ಅವರಲ್ಲಿ ನೆಲೆಗೊಂಡಿರುವದು.

ಭಕ್ತರು ಎಂದೂ ವಾದದಲ್ಲಿ ಬೀಳಕೂಡದು ಯಾಕಂದರೆ
ಅದರಿಂದ ಲಾಭವಿಲ್ಲ. ವಾದದಿಂದ ಭಕ್ತಿಯು ಸಾಧಿಸದು.

ಭಕ್ತರು ಭಕ್ತಿಶಾಸ್ತ್ರಗಳನ್ನು ಅಭ್ಯಸಿಸಬೇಕು ಹಾಗೂ
ಭಕ್ತಿಗೆ ಸಾಧಕವಾದ ಕರ್ಮಗಳನ್ನು ಮಾಡುತಿರಬೇಕು. ಒಂದರೆ
ಕ್ಷಣ ಸಹ ಅವರು ವ್ಯರ್ಥ ಕಳೆಯಬಾರದು.

ಅಹಿಂಸೆ, ಸತ್ಯ, ಶುಚಿತ್ವ, ದಯೆ, ಆಸ್ತಿಕ್ಯಬುದ್ಧಿ ಈ
ಪಂಚ ಮಹಾನಿಯಮಗಳನ್ನು ಭಕ್ತರು ಆಚರಿಸಬೇಕು.
ನಿಶ್ಚಿಂತ ಚಿತ್ತದಿಂದ ಅನನ್ಯರಾಗಿ ಭಗವಂತನನ್ನು ಭಜಿಸಬೇಕು.
ಈ ರೀತಿ ಮಾಡಿದರೆ ಭಗವಂತನು ತೀವ್ರವೆ ಪ್ರಸನ್ನನಾಗಿ
ಭಕ್ತನಿಗೆ ದರ್ಶನವನ್ನು ಕೊಡುವನು. ಭಗವಂತನ ಭಕ್ತಿ
ಯೆಂಬುದು ಎಲ್ಲಕ್ಕೂ ಶ್ರೇಷ್ಠ ಸಾಧನವು.

ಪ್ರೇಮರೂಪ ಭಕ್ತಿ ಎಂಬುದು ಒಂದೇ ಒಂದು. ಆದರೆ
ಅದು ಹನ್ನೊಂದು ವಿಧವಾಗಿ ವ್ಯಕ್ತವಾಗಬಹುದು. ಅದು
ಹೇಗಂದರೆ, ಭಗವಂತನ ಗುಣಮಹಾತ್ಮ್ಯದಲ್ಲಿ ಆಸಕ್ತಿ,
ರೂಪಾಸಕ್ತಿ, ಪೂಜಾಸಕ್ತಿ, ಸ್ಮರಣಾಸಕ್ತಿ, ದಾಸ್ಯಾಸಕ್ತಿ,
ಸಖ್ಯಾಸಕ್ತಿ, ವಾತ್ಸಲ್ಯಾಸಕ್ತಿ, ಕಾಂತಾಸಕ್ತಿ, ಆತ್ಮನಿವೇದನಾ
ಸಕ್ತಿ, ತನ್ಮಯಾಸಕ್ತಿ, ಪರಮವಿರಹಾಸಕ್ತಿ.

ಜನರ ನಿಂದಾಸ್ತುತಿಗಳನ್ನು ಲೆಕ್ಕಿಸದೆ ಭಕ್ತಾಚಾರ್ಯರಾದ
ಕುಮಾರವ್ಯಾಸ, ಶುಕ ಶಾಂಡಿಲ್ಯ ಗರ್ಗ ವಿಷ್ಣು ಕೌಂಡಿಲ್ಯ
ಶೇಷ ಉದ್ಧವ ಆರುಣಿ ಬಲಿ ಹನುಮಂತ ವಿಭೀಷಣಾದಿಗಳು
ಏಕಮತದಿಂದ ಮೇಲಿನಂತೆ ಹೇಳಿರುವರು.

ನಾರದೋಕ್ತವಾದ ಈ ಭಕ್ತಿಶಾಸ್ತ್ರದಲ್ಲಿ ವಿಶ್ವಾಸವಿಟ್ಟು ಶ್ರದ್ಧೆಯಿಂದ ನಡಕೊಳ್ಳುವವನಲ್ಲಿ ಭಕ್ತಿಯು ಹುಟ್ಟಿ ಅವನಿಗೆ ಇಷ್ಟವಾದ ಭಗವತ್ಪ್ರೇಮವು ಪ್ರಾಪ್ತವಾಗುವುದು.

|| ಓಂ ನಮೋ ಭಗವತೇ ವಾಸುದೇವಾಯ ||

# ನಾರದೀಯ ಭಕ್ತಿಸೂತ್ರಗಳು

ಅಥಾತೋ ಭಕ್ತಿಂ ವ್ಯಾಖ್ಯಾಸ್ಯಾಮಃ || ೧ ||

'ಈಗ ಭಕ್ತಿಯನ್ನು ಕುರಿತು ವ್ಯಾಖ್ಯಾನವನ್ನು ಹೇಳು ವೆವು' (೧). (ಎಂದು ಪರಮ ಭಗವದ್ಭಕ್ತರಾದ ದೇವರ್ಷಿ ನಾರದರು ಭಕ್ತಿಶಾಸ್ತ್ರದ ಸೂತ್ರಗಳನ್ನು ಬರೆಯಲಾರಂಭಿ ಸುವರು).

## ಭಕ್ತಿಯ ವ್ಯಾಖ್ಯೆ

ಸಾತ್ವಸ್ಮಿನ್ (ತು ಅಸ್ಮಿನ್) ಪರಮಪ್ರೇಮರೂಪಾ || ೨ ||
ಅಮೃತಸ್ವರೂಪಾ ಚ || ೩ ||

ಭಗವಂತನನ್ನು ಕುರಿತು ಆತ್ಯಂತಿಕ ಅನನ್ಯ ಪ್ರೀತಿಯೆ ಭಕ್ತಿಯು (೨). ಅದು ಅಮೃತದಂತೆ ರುಚಿಯು, ಆನಂದ-ದಾಯಕವು, ಅಮರಪದವನ್ನು ಕೊಡುವಂತಹದು (೩)

## ಭಕ್ತಿಯ ಫಲ

ಯಲ್ಲಬ್ಧ್ವಾ (ಯತ್ ಲಬ್ಧ್ವಾ) ಪುಮಾನ್ ಸಿದ್ಧೋ ಭವತಿ ಅಮೃತೋ ಭವತಿ ತೃಪ್ತೋ ಭವತಿ || ೪ || ಯತ್ಪ್ರಾಪ್ಯ ನ ಕಿಂಚಿದ್ವಾಂಛತಿ ನ ಶೋಚತಿ ನ ದ್ವೇಷ್ಟಿ ನ ರಮತೇ ನೋತ್ಸಾಹೀ ಭವತಿ || ೫ || ಯಜ್ಞಾತ್ವಾ ಮತ್ತೋ ಭವತಿ ಸ್ತಬ್ಧೋ ಭವತಿ ಆತ್ಮಾರಾಮೋ ಭವತಿ || ೬ ||

ಭಕ್ತಿಯನ್ನು ಪಡೆದವನು (ಭಕ್ತನಾದವನು) ಸಿದ್ಧಪುರುಷನಾಗುವನು, ಅಮರನಾಗುವನು, ಸಂಪೂರ್ಣ ತೃಪ್ತಿಯನ್ನು ಹೊಂದುವನು (೪). ಭಕ್ತಿಯು ಅಳವಟ್ಟ ಬಳಿಕ ಭಕ್ತನು ಏನನ್ನೂ (ಭಗವಂತನನ್ನುಳಿದು) ಇಚ್ಛಿಸುವುದಿಲ್ಲ; ಅವನು ಶೋಕರಹಿತನೂ ದ್ವೇಷರಹಿತನೂ ಆಗುವನು. ಅವನು ಯಾವ (ಇತರ) ವಿಷಯಗಳಲ್ಲಿಯೂ ರಮಿಸುವದಿಲ್ಲ—ರಮಮಾಣನಾಗುವದಿಲ್ಲ, ಯಾವ (ಇತರ) ವಿಷಯಗಳ ಬಗ್ಗೆಯೂ ಉತ್ಸಾಹ ತೋರುವುದಿಲ್ಲ (೫). ಭಕ್ತಿಯನ್ನು-ಭಕ್ತಿರಹಸ್ಯವನ್ನು ಅರಿತವನು ಭಗವಂತನ ಪ್ರೇಮಾತಿಶಯದಿಂದ ಹುಚ್ಚನಂತಾಗುವನು, ಶಾಂತನಾಗಿ ಸ್ತಬ್ಧನಾಗುವನು (ನಿಶ್ಚೇಷ್ಟನಾಗುವನು), ಆತ್ಮಾನಂದದಲ್ಲಿ ಮಗ್ನನಾಗುವನು (೬).

## ಅನನ್ಯಭಾವ

**ಸಾ ನ ಕಾಮಯಮಾನಾ ನಿರೋಧರೂಪತ್ವಾತ್ ॥ ೭ ॥**
**ನಿರೋಧಸ್ತು ಲೋಕವೇದವ್ಯಾಪಾರನ್ಯಾಸಃ ॥ ೮ ॥**

ಭಕ್ತಿಯು ಏನನ್ನೂ ಇಚ್ಛಿಸುವುದಿಲ್ಲ (ಅದು ನಿಷ್ಕಾಮವು) ಯಾಕಂದರೆ ಭಕ್ತಿಯು ನಿರೋಧರೂಪವು (ಎಲ್ಲ ಇಚ್ಛೆಗಳ ನಿರೋಧ ಮಾಡುವಂತಹದು, ಅವುಗಳನ್ನು ಉಪಸಂಹರಿಸುವಂತಹದು) (೭). ಲೌಕಿಕ ಹಾಗೂ ವೈದಿಕ ವ್ಯವಹಾರಗಳ ಸನ್ಯಾಸವೆ ನಿರೋಧವೆನಿಸುವದು (ಫಲ ತ್ಯಾಗಮಾಡಿ ಸರ್ವಾರ್ಪಣಪೂರ್ವಕ ಮಾಡಿದ ವ್ಯವಹಾರವೆ ಸನ್ಯಾಸವು (೮).

**ತಸ್ಮಿನ್ನನನ್ಯತಾ ತದ್ವಿರೋಧಿಷೂದಾಸೀನತಾ ॥ ೯ ॥**
**ಅನ್ಯಾಶ್ರಯಾಣಾಂ ತ್ಯಾಗೋಽನನ್ಯತಾ ॥ ೧೦ ॥**

ಭಗವಂತನಲ್ಲಿ ಅನನ್ಯವಾದ (ಏಕಾಂತಿಕ) ಪ್ರೀತಿ, ಭಗವಂತನ ವಿರೋಧಿಗಳಲ್ಲಿ ಉದಾಸೀನತೆ (ಇದು ಭಕ್ತ-

ಲಕ್ಷಣವು ) ( ೯ ). ಇತರ ಎಲ್ಲ ಅವಲಂಬನಗಳನ್ನು, ಆಧಾರ ಗಳನ್ನು ಬಿಟ್ಟುಬಿಡುವುದೆ ಅನನ್ಯತೆ ಎನಿಸುವುದು ( ೧೦ ).

**ಲೋಕೇವೇದೇಷು ತದನುಕೂಲಾಚರಣಂ ತದ್ವಿರೋಧಿಷೂ-ದಾಸೀನತಾ ॥ ೧೧ ॥**

ಲೌಕಿಕ ಹಾಗೂ ವೈದಿಕ ಕರ್ಮಗಳಲ್ಲಿ ಕೂಡ ಭಕ್ತಿಗೆ ಪೋಷಕವಾದವುಗಳನ್ನು ಮಾತ್ರ ಮಾಡುವದು ಹಾಗೂ ಉಳಿದ ಕರ್ಮಗಳನ್ನು ಕುರಿತು ಉದಾಸೀನವಿರುವದು ಅನನ್ಯಭಾವದ ಲಕ್ಷಣವು. ( ಉದಾ: ತಂದೆಯ ಮಾತು ಕೇಳತಕ್ಕದ್ದೆಂಬು ದೊಂದು ಲೌಕಿಕ ಕರ್ತವ್ಯ. ಆದರೆ ಪ್ರಲ್ಹಾದನು ಕೇಳಲಿಲ್ಲ. ಯಾಕಂದರೆ ಹಾಗೆ ಕೇಳುವುದು ಭಕ್ತಿಗೆ ವಿರೋಧಕವಾಗು ತಿತ್ತು ( ೧೧ ).

## ಶಾಸ್ತ್ರೋಕ್ತ ಹಾಗೂ ಲೌಕಿಕ ಕರ್ಮ

**ಭವತು ನಿಶ್ಚಯದಾರ್ಢ್ಯಾದೂರ್ಧ್ವಂ ಶಾಸ್ತ್ರರಕ್ಷಣಮ್ ॥೧೨॥**
**ಅನ್ಯಥಾ ಪಾತಿತ್ಯಶಂಕಯಾ ॥ ೧೩ ॥**

( ಭಕ್ತಿಮಾರ್ಗವನ್ನೆ ಅವಲಂಬಿಸಬೇಕೆಂದು ) ಮನಸಿನಲ್ಲಿ ನಿಶ್ಚಯವಾಗಿ ಆ ನಿಶ್ಚಯವು ದೃಢವಾದ ಬಳಿಕ ಸಹ ಶಾಸ್ತ್ರ ದಂತೆ ಕರ್ಮಗಳನ್ನು ಆಚರಿಸುತ್ತಿರಬೇಕು ( ೧೨ ). ಇಲ್ಲದ ಹೋದರೆ ಪುನಃ ಆ ಭಕ್ತಿಮಾರ್ಗದಿಂದ ಚ್ಯುತರಾಗುವ ಭಯ ವಿದೆ ( ೧೩ ).

**ಲೋಕೋಽಪಿ ತಾವದೇವ ಕಿಂತು ಭೋಜನಾದಿ ವ್ಯಾಪಾರಸ್ತ್ವಾಶರೀರಧಾರಣಾವಧಿ ॥ ೧೪ ॥**

ಲೌಕಿಕ ಕರ್ಮಗಳನ್ನು ಕೂಡ ಅದೇ ರೀತಿ ಯೋಗ್ಯವಾಗಿ ಮಾಡುತ್ತ ಇರಬೇಕು. ( ಅವುಗಳನ್ನು ಬಿಡಕೂಡದು ). ಭೋಜನಾದಿ ಶರೀರ ವ್ಯಾಪಾರಗಳೆಲ್ಲ ಶರೀರವಿರುವ ವರೆ

ನಡೆಯಬೇಕಾದವುಗಳು. ( ವಿಧಿನಿಷೇಧಾತೀತಾವಸ್ಥೆ ಪ್ರಾಪ್ತವಾದ ಬಳಿಕ ಉಳಿದ ಕರ್ಮಗಳು ನಡೆಯಬಹುದು ಇಲ್ಲವೆ ಬಿಡಬಹುದು. ಆದರೆ ಭೋಜನಾದಿಗಳು ಮಾತ್ರ ಸಾಯುವವರೆಗೆ ನಡೆಯಲೇಬೇಕಾಗುವವು) ( ೧೪ ).

## ಭಕ್ತಿಯ ಲಕ್ಷಣಗಳು

**ತಲ್ಲಕ್ಷಣಾನಿ ವಾಚ್ಯಂತೇ ನಾನಾಮತಭೇದಾತ್ ॥ ೧೫ ॥**

ನಾನಾ ಮತಭೇದಗಳಿದ್ದುದರಿಂದ ಭಕ್ತಿಯ ನಿಜವಾದ ಲಕ್ಷಣಗಳು ಇಲ್ಲಿ ಹೇಳಲಾಗುತ್ತಿವೆ ( ೧೫ ).

**ಪೂಜಾದಿಷ್ವನುರಾಗಃ ಇತಿ ಪಾರಾಶರ್ಯಃ ॥ ೧೬ ॥ ಕಥಾದಿಷ್ವಿತಿ ಗರ್ಗಃ ॥ ೧೭ ॥ ಆತ್ಮರತ್ಯವಿರೋಧೇನೇತಿ ಶಾಂಡಿಲ್ಯಃ ॥ ೧೮ ॥ ನಾರದಸ್ತು ತದರ್ಪಿತಾಖಿಲಾಚಾರಿತಾ ತದ್ವಿಸ್ಮರಣೇ ಪರಮವ್ಯಾಕುಲತೇತಿ ॥ ೧೯ ॥**

ಭಗವಂತನ ಪೂಜಾದಿ ಕರ್ಮಗಳಲ್ಲಿ ಪ್ರೀತಿ ಆಸಕ್ತಿಗಳಿರುವುದೆ ಭಕ್ತಿಲಕ್ಷಣವೆಂದು ಪರಾಶರ ಪುತ್ರನಾದ ವ್ಯಾಸನ ಅಭಿಪ್ರಾಯ ( ೧೬ ). ಭಗವಂತನ ಕಥಾಸಂಕೀರ್ತನಾದಿಗಳಲ್ಲಿ ಪ್ರೀತಿ ಇರುವುದೆ ಭಕ್ತಿಲಕ್ಷಣವೆಂದು ಗರ್ಗನ ಅಭಿಪ್ರಾಯ ( ೧೭ ) ಇತರ ಯಾವ ವ್ಯಗ್ರತೆ ಇಲ್ಲದೆ ಸತತವೂ ಆತ್ಮನಲ್ಲಿ ರತನಿರುವುದೆ ಭಕ್ತಿಯ ಲಕ್ಷಣವೆಂದು ಶಾಂಡಿಲ್ಯನ ಅಭಿಪ್ರಾಯ ( ೧೮ ). ಆದರೆ, ಅಖಿಲ ವೈದಿಕ ಲೌಕಿಕ ಕರ್ಮಗಳನ್ನು ಭಗವಂತನಿಗೆ ಅರ್ಪಿಸುವದು ಹಾಗೂ ಅವನ ವಿಸ್ಮರಣದಿಂದ ( ಮರವಿನಿಂದ ) ಅತ್ಯಂತ ವ್ಯಾಕುಲನಾಗುವುದು ಇವೇ ನಿಜವಾದ ಭಕ್ತಿಲಕ್ಷಣಗಳೆಂದು ನಾರದನ ಅಭಿಪ್ರಾಯ ( ೧೯ ).

**ಅಸ್ತ್ಯೇವಮೇವಮ್ ॥ ೨೦ ॥**

ಅಹುದು, ಇದು ನಿಜವಾಗಿ ಇರುವುದಾದರೂ ಹೀಗೆಯೇ (ನಾರದರ ಹೇಳಿಕೆಯ ಮೇರೆಗೆ) (೨೦).

**ಯಥಾ ವ್ರಜಗೋಪಿಕಾನಾಮ್ ॥ ೨೧ ॥ ತತ್ರಾಪಿ ನ ಮಾಹಾತ್ಮ್ಯ ಜ್ಞಾನ ವಿಸ್ಮೃತ್ಯಪವಾದಃ ॥ ೨೨ ॥ ತದ್ವಿಹೀನಂ ಜಾರಾಣಾಮಿವ ॥ ೨೩ ॥ ನಾಸ್ತ್ಯೇವ ತಸ್ಮಿಂಸ್ತತ್ಸುಖ ಸುಖಿತ್ವಮ್ ॥ ೨೪ ॥**

ಉದಾಹರಣೆಗಾಗಿ ವ್ರಜದ ಅಂದರೆ ವೃಂದಾವನದ ಗೋಪಿಕೆಯರ ಭಕ್ತಿಯನ್ನು ನೋಡಬೇಕು (೨೧). ಅವರ ಭಕ್ತಿಯಲ್ಲಿಯೂ ಭಗವಂತನ ಮಾಹಾತ್ಮ್ಯಜ್ಞಾನದ ವಿಸ್ಮರಣ ಎಂಬ ದೋಷವು ಇರಲಿಲ್ಲ. (ಪ್ರೇಮಾತಿಶಯವಾದಾಗ ಮಾಹಾತ್ಮ್ಯದ ಮರವು ಆಗುವುದೆಂಬ ಆಕ್ಷೇಪಕ್ಕೆ ಇದು ಸಮಾಧಾನ) (೨೨). ಭಗವಂತನ ಮಾಹಾತ್ಮ್ಯಜ್ಞಾನ ವಿಲ್ಲದ ಪ್ರೇಮವು ಜಾರಜಾರಿಣಿಯರ ಪ್ರೇಮದಂತೆ (ಕೇವಲ ವಿಷಯಲಾಲಸೆಯಿಂದ ಕೂಡಿದುದು, ಸ್ವಾರ್ಥಿಯು) (೨೩). ಪ್ರೀತಿಪಾತ್ರನ ಸುಖದಲ್ಲಿಯೇ ತನ್ನ ಸುಖವು ಎಂಬ ಪರಾರ್ಥ ಭಾವನೆಯು ಆ ಜಾರಜಾರಿಣಿಯರ ಪ್ರೇಮದಲ್ಲಿರಲರಿಯದು (೨೪).

## ಭಕ್ತಿಮಾರ್ಗವೆ ಸರ್ವಶ್ರೇಷ್ಠ

**ಸಾ ತು ಕರ್ಮಜ್ಞಾನಯೋಗೇಭ್ಯೋಽಪ್ಯಧಿಕತರಾ ॥ ೨೫ ॥ ಫಲರೂಪತ್ವಾತ್ ॥ ೨೬ ॥ ಈಶ್ವರಸ್ಯಾಪ್ಯಭಿಮಾನದ್ವೇಷಿತ್ವಾ ದ್ದೈನ್ಯ ಪ್ರಿಯತ್ವಾಚ್ಚ ॥ ೨೭ ॥**

ಪ್ರೇಮಮಯ ಭಕ್ತಿಯು ಕರ್ಮಮಾರ್ಗ, ಜ್ಞಾನಮಾರ್ಗ, ಪಾತಂಜಲ ಯೋಗಮಾರ್ಗ ಇವುಗಳಿಗಿಂತ ಶ್ರೇಷ್ಠವಾದುದು (೨೫). ಯಾಕಂದರೆ ಇದು (ಕೇವಲ ಸಾಧನರೂಪವಿರದೆ)

ಸ್ವ ಯಂ ಫ ಲ ಸ್ವ ರೂ ಪ ವಿ ರು ವ ದು ( ೨೬ ). ಮೇಲಾಗಿ ಪರಮಾತ್ಮನು ಕೂಡ ಅಹಂಕಾರ ಅಭಿಮಾನಗಳನ್ನು ದ್ವೇಷಿಸುವನು ಹಾಗೂ ದೈನ್ಯ ನಮ್ರಭಾವಗಳನ್ನು ಪ್ರೀತಿಸುವನು. ( ಕರ್ಮಾದಿ ಮಾರ್ಗಗಳಲ್ಲಿ, ನಾನು ಮಾಡುವೆನು, ಎಂಬ ಅಭಿಮಾನವು ಪ್ರಾರಂಭದಲ್ಲಿದ್ದೇ ಇರುವದು. ಭಕ್ತಿಮಾರ್ಗದಲ್ಲಿ ಸರ್ವಾರ್ಪಣದಿಂದಲೆ ಪ್ರಾರಂಭವಿರುವುದರಿಂದ ಅನನ್ಯ ಶರಣಾಗತಿಯೇ ಅದರ ಲಕ್ಷಣವಿರುವುದರಿಂದ ಭಕ್ತನು ಮೊದಲಿನಿಂದಲೇ ನಿರಹಂಕಾರಿಯೂ ದೈನ್ಯಭಾವವುಳ್ಳವನೂ ಇರುವನು. ಆದುದರಿಂದ ಅವನು ಭಗವಂತನಿಗೆ ಕೂಡಲೆ ಪ್ರಿಯನಾಗುವನು ) ( ೨೭ ).

ತಸ್ಯ ಜ್ಞಾ ನ ಮೇ ವ ಸಾಧನಮಿತ್ಯೇಕೇ ॥೨೮॥
ಅನ್ಯೋನ್ಯಾಶ್ರಯತ್ವಮಿತ್ಯನ್ಯೇ ॥ ೨೯ ॥ ಸ್ವಯಂಫಲರೂಪತೇತಿ ಬ್ರಹ್ಮಕುಮಾರಃ ॥ ೩೦ ॥

ಜ್ಞಾನವೆ ಆ ಭಕ್ತಿಯ ಸಾಧನವೆಂದು ಹಲವರ ಅಭಿಪ್ರಾಯ (೨೮ ). ಭಕ್ತಿಜ್ಞಾನಗಳು ಒಂದನ್ನೊಂದು ಅವಲಂಬಿಸಿರುವವು ಎಂದು ಅನ್ಯರ ಅಭಿಪ್ರಾಯ ( ೨೯ ). ಭಕ್ತಿಯು ( ಸಾಧನರೂಪವಿರದೆ ) ಸ್ವಯಂಫಲಸ್ವರೂಪವಿರುವುದೆಂದ ನಾರದರ ಅಭಿಪ್ರಾಯ ( ೩೦ ).

ರಾಜಗೃಹಭೋಜನಾದಿಷು ತಥೈವ ದೃಷ್ಟತ್ವಾತ್ ॥ ೩೧ ॥
ನ ತೇನ ರಾಜಪರಿತೋಷಃ ಕ್ಷುಧಾಶಾಂತಿರ್ವಾ ॥ ೩೨ ॥
ತಸ್ಮಾತ್ಸೈವ ಗ್ರಾಹ್ಯಾ ಮುಮುಕ್ಷುಭಿಃ ॥ ೩೩ ॥

( ಉದಾಹರಣೆಯಿಂದ ಮೇಲಿನ ಮಾತು ಸ್ಪಷ್ಟಗೊಳಿಸಲಾಗಿದೆ. ಅರಮನೆ ಹಾಗೂ ಊಟ ಇವುಗಳ ವಿಷಯದಲ್ಲಿ ಹೀಗೆಯೆ ಕಂಡುಬರುವದು ( ೩೧ ). ( ಅದರಿಂದ ಅರಮನೆಯ ಕೇವಲ ಜ್ಞಾನ ಧ್ಯಾನಗಳಿಂದ ) ಅರಸನ ಅನುಗ್ರಹವಾಗದು. ಅದರಿಂ

( ಊಟದ ಜ್ಞಾನ ಧ್ಯಾನಗಳಿಂದ ) ಹಸಿವೆ ಹಿಂಗದು ( ೩೨ ). ಆದುದರಿಂದ ಮೋಕ್ಷದ ಇಚ್ಛೆ ಇದ್ದವರು ( ಸ್ವಯಂಫಲರೂಪವಾದ, ಭಗವದನುಗ್ರಹರೂಪ ಆನಂದವನ್ನು ಕೂಡಲೆ ಕೊಡಲಾರಂಭಿಸುವ ) ಭಕ್ತಿಯನ್ನೇ ಅವಲಂಬಿಸಬೇಕು ( ೩೩ ).

## ಸಾಧನ ಹಾಗೂ ಸತ್ಸಂಗ

ತಸ್ಯಾಃ ಸಾಧನಾನಿ ಗಾಯಂತಿ ಆಚಾರ್ಯಾಃ ॥ ೩೪ ॥

ಆಚಾರ್ಯರು ( ಭಕ್ತಿಶಾಸ್ತ್ರದಲ್ಲಿ ನಿಷ್ಣಾತರಿದ್ದವರು ) ಭಕ್ತಿಯ ಸಾಧನಗಳನ್ನು ಕೆಳಗಿನಂತೆ ವರ್ಣಿಸುವರು ( ೩೪ ).

ತತ್ತು ವಿಷಯತ್ಯಾಗಾತ್ ಸಂಗತ್ಯಾಗಾಚ್ಚ ॥ ೩೫ ॥ ಅವ್ಯಾವೃತ ಭಜನಾತ್ ॥ ೩೬ ॥ ಲೋಕೇಽಪಿ ಭಗವದ್ಗುಣ ಶ್ರವಣ ಕೀರ್ತನಾತ್ ॥ ೩೭ ॥ ಮುಖ್ಯತಸ್ತು ಮಹತ್ಕೃಪ ಯೈವ ಭಗವತ್ಕೃಪಾಲೇಶಾದ್ವಾ ॥ ೩೮ ॥

ವಿಷಯಗಳ ತ್ಯಾಗದಿಂದ ಹಾಗೂ ಆ ವಿಷಯಗಳನ್ನು ಕುರಿತು ಇರುವ ಆಸಕ್ತಿಯ ತ್ಯಾಗದಿಂದ ಭಕ್ತಿಯು ಸಾಧಿಸುವದು ( ೩೫ ). ಅಖಂಡವಾದ ನಿರಂತರ ಭಜನದಿಂದ ಭಕ್ತಿಯು ಸಾಧಿಸುವದು. ( ೩೬ ). ಬಹುಜನ ಸಮಾಜದಲ್ಲಿರುವಾಗ ಕೂಡ ಭಗವಂತನ ಗುಣಶ್ರವಣದಿಂದಲೂ ಗುಣಸಂಕೀರ್ತನ ದಿಂದಲೂ ಭಕ್ತನಿಗೆ ಭಕ್ತಿಯು ಸಾಧಿಸಬಲ್ಲದು ( ೩೭ ). ಆದರ ಮುಖ್ಯ ಸಾಧನವೆಂದರೆ ಮಹಾಪುರುಷರ ಪೂರ್ಣ ಕೃಪೆ ಇಲ್ಲವೆ ಭಗವಂತನ ಕೃಪಾಲೇಶ ಇವುಗಳಿಂದ ಭಕ್ತಿಯು ಸಾಧಿಸುವದು ( ೩೮ ).

ಮಹತ್ಸಂಗಸ್ತು ದುರ್ಲಭೋಽಗಮ್ಯೋಽಮೋಘಶ್ಚ ॥ ೩೯ ॥ ಲಭ್ಯತೇಽಪಿ ತತ್ಕೃಪಯೈವ ॥ ೪೦ ॥ ತಸ್ಮಿಂಸ್ತಜ್ಜನೇ ಭೇದಾ-ಭಾವಾತ್ ॥ ೪೧ ॥ ತದೇವ ಸಾಧ್ಯತಾಂ ತದೇವ ಸಾಧ್ಯತಾಮ್ ॥ ೪೨ ॥

ಆದರೆ ಮಹಾಪುರುಷರ ಸಂಗವು ಬಹು ದುರ್ಲಭ. ಅದು ಯಾವಾಗ ಹೇಗೆ ದೊರೆಯುವದೆಂಬದನ್ನು ಹೇಳುವದಸಾಧ್ಯ. ಒಮ್ಮೆ ದೊರೆತರೆ ಅದು ರಾಮಬಾಣದಂತೆ ಪರಿಣಾಮಕಾರಿಯು (೩೯). ಮಹಾಪುರುಷರ ಸಂಗವು ಕೂಡ ಭಗವಂತನ ಕೃಪೆಯಿಂದಲೆ ಪ್ರಾಪ್ತವಾಗಬಲ್ಲದು (೪೦). ಯಾಕಂದರೆ ಭಗವಂತನಿಗೂ ಅವನ ಭಕ್ತರಾದ ಮಹಾಪುರುಷರಿಗೂ ಭೇದವಿಲ್ಲ. (ಮಹಾಪುರುಷರ ಕೃಪೆಯಾದರೆ ಭಗವಂತನು ದೂರವಿಲ್ಲ, ಭಗವಂತನ ಕೃಪೆಯಾದರೆ ಮಹಾಪುರುಷರು ದೂರವಿಲ್ಲ) (೪೧). ಆದುದರಿಂದ ಸತ್ಸಂಗವನ್ನೆ ಸಾಧಿಸಬೇಕು, ಸತ್ಸಂಗವನ್ನೆ ದೊರಕಿಸಬೇಕು (೪೨).

## ದುಃಸಂಗವು ಘಾತಕವು

**ದುಃಸಂಗಃ ಸರ್ವಥೈವ ತ್ಯಾಜ್ಯಃ ॥ ೪೩ ॥ ಕಾಮಕ್ರೋಧಮೋಹಸ್ಮೃತಿಭ್ರಂಶಬುದ್ಧಿನಾಶ ಸರ್ವನಾಶಕಾರಣತ್ವಾತ್ ॥ ೪೪ ॥ ತರಂಗಾಯಿತಾ ಅಪೀಮೇ ಸಂಗಾತ್ಸಮುದ್ರಾಯಂತಿ ॥ ೪೫ ॥**

ದುರ್ಜನರ ಸಂಗವನ್ನು ಪುಟ್ಟಪೂರಾ ಬಿಟ್ಟುಬಿಡುವುದು ಅವಶ್ಯವು (೪೩). ಯಾಕಂದರೆ ದುಷ್ಟರ ಸಂಗವು ಕಾಮ (ಇಚ್ಛೆ, ಆಶೆ), ಕ್ರೋಧ, ಮೋಹ, ಸ್ಮರಣಶಕ್ತಿಯ ನಾಶ, ಬುದ್ಧಿಯ ನಾಶ, ಹಾಗೂ ಸರ್ವನಾಶ ಇವುಗಳ ಕಾರಣವಾಗುವುದು (೪೪). ಈ ಕಾಮಕ್ರೋಧಾದಿಗಳು ಮೊದಲು ಮನಸ್ಸಿನಲ್ಲಿ ಚಿಕ್ಕ ಚಿಕ್ಕ ತರಂಗಗಳಂತೆ ಇದ್ದರೂ ದುಃಸಂಗದಿಂದ ಇವು ಸಮುದ್ರದಷ್ಟು ದೊಡ್ಡವಾಗುವವು. (೪೫).

## ಮಾಯೆಯನ್ನು ದಾಟುವುದು

**ಕಸ್ತರತಿ ಕಸ್ತರತಿ ಮಾಯಾಂ ಯಃ ಸಂಗಂ ತ್ಯಜತಿ ಯೋ ಮಹಾನುಭಾವಂ ಸೇವತೇ ನಿರ್ಮಮೋ ಭವತಿ ॥ ೪೬ ॥**

ಯೋ ವಿವಿಕ್ತಸ್ಥಾನಂ ಸೇವತೇ ಯೋ ಲೋಕ ಬಂಧಮೂಲಮುನ್ಮೂಲಯತಿ ನಿಸ್ತ್ರೈಗುಣ್ಯೋ ಭವತಿ ಯೋಗಕ್ಷೇಮಂ ತ್ಯಜತಿ ॥ ೪೭ ॥ ಯಃ ಕರ್ಮಫಲಂ ತ್ಯಜತಿ ಕರ್ಮಾಣಿ ಸನ್ಯಸ್ಯತಿ ತತೋ ನಿರ್ದ್ವಂದ್ವೋ ಭವತಿ ॥ ೪೮ ॥ ವೇದಾನಪಿ ಸನ್ಯಸ್ಯತಿ ಕೇವಲಮವಿಚ್ಛಿನ್ನರಾಗಂ ಲಭತೇ ॥ ೪೯ ॥ ಸ ತರತಿ ಸ ತರತಿ ಸಲೋಕಾಂಸ್ತಾರಯತಿ॥ ೫೦ ॥

ಮಾಯೆಯನ್ನು ಅಜ್ಞಾನವನ್ನು ಯಾರು ದಾಟಬಲ್ಲರು, ಯಾರು ಗೆದೆಯಬಲ್ಲರು? ಆಸಕ್ತಿಯನ್ನು ಬಿಡುವವನು, ಮಹಾನುಭಾವರ ಸೇವೆ ಮಾಡುವವನು ಮಮತ್ವರಹಿತನಾಗುವನು (೪೬). ಏಕಾಂತದಲ್ಲಿರುವವನು, ಲೌಕಿಕ ಬಂಧನಗಳ ಬೇರುಗಳನ್ನು ಕಿತ್ತೊಗೆಯುವವನು ಸತ್ವರಜತಮಗಳನ್ನು ದಾಟುವನು, ಇದ್ದುದನ್ನು ರಕ್ಷಿಸುವ ಹಾಗೂ ಇಲ್ಲದುದನ್ನು ದೊರಕಿಸುವ ಹವಣಿಕೆಯನ್ನು ಬಿಟ್ಟುಬಿಡುವನು (೪೭). ಕರ್ಮಫಲಗಳ ಆಸಕ್ತಿಯನ್ನು ಬಿಡುವವನು ಸಕಾಮ ಕರ್ಮಗಳನ್ನು ಪೂರ್ಣ ಬಿಟ್ಟು ಸುಖ ದುಃಖಾದಿ ದ್ವಂದ್ವಗಳ ಆಚೆಗೆ ಹೋಗುವನು (೪೮). ಅವನು ವೇದಗಳ ಗೊಡವೆಯನ್ನು ಕೂಡ ಬಿಟ್ಟುಬಿಡುವನು, ಕೇವಲ ಅಖಂಡ ಶುದ್ಧ ಭಗವತ್ಪ್ರೇಮದಲ್ಲಿ ತನ್ಮಯನಾಗುವನು (೪೯). ಅವನು ಮಾಯೆಯನ್ನು ದಾಟುವನು, ಈ ಮಾಯೆಯನ್ನು ದಾಟುವನು. ಅವನು ಜನರನ್ನು ದಾಟಿಸುವನು (೫೦).

## ಪ್ರೇಮರೂಪ ಭಕ್ತಿ ಅಥವಾ ‘ಮುಖ್ಯಾಭಕ್ತಿ’

ಅನಿರ್ವಚನೀಯಂ ಪ್ರೇಮಸ್ವರೂಪಮ್ ॥ ೫೧ ॥ ಮೂಕಾಸ್ವಾದನವತ್ ॥ ೫೨ ॥ ಪ್ರಕಾಶತೇ ಕ್ವಾಪಿಪಾತ್ರೇ ॥ ೫೩ ॥ ಗುಣರಹಿತಂ ಕಾಮನಾರಹಿತಂ ಪ್ರತಿಕ್ಷಣವರ್ಧಮಾನಮ-

**ವಿಚ್ಛಿನ್ನಂ ಸೂಕ್ಷ್ಮತರಮನುಭವರೂಪಮ್ ॥ ೫೪ ॥**
**ತತ್ಪ್ರಾಪ್ಯ ತದೇವಾವಲೋಕಯತಿ ತದೇವ ಶೃಣೋತಿ ತದೇವ ಭಾಷಯತಿ ತದೇವ ಚಿಂತಯತಿ ॥ ೫೫ ॥**

ಪ್ರೇಮದ ಸ್ವರೂಪವು ಅವರ್ಣನೀಯವು ( ೫೧ ). ಅದು ಮೂಕರು ರುಚಿಯುಂಡಂತೆ (ಅನುಭವವಿದ್ದರೂ ಹೇಳಲಾರರು) ( ೫೨ ). ಎಲ್ಲಿಯಾದರೂ ಯೋಗ್ಯ ವ್ಯಕ್ತಿಯಲ್ಲಿ ಅದು ಪ್ರಕಟವಾಗುವುದು (೫೩). ಅದು ತ್ರಿಗುಣಗಳಾಚೆಗಿನದು, ನಿಷ್ಕಾಮವು, ಪ್ರತಿಕ್ಷಣವು ಹೆಚ್ಚಾಗುತ್ತ ಹೋಗುವಂತಹದು, ಅಖಂಡವು, ಅತ್ಯಂತ ಸೂಕ್ಷ್ಮವು, ಅನುಭವರೂಪವು ( ೫೪ ). ಒಮ್ಮೆ ಆ ಪ್ರೇಮವು ಅಳವಟ್ಟಿತೆಂದರೆ ಭಕ್ತನು ತನ್ನ ಪ್ರೇಮವಿಷಯವಾದ ಭಗವಂತನನ್ನೇ ಎಲ್ಲೆಲ್ಲಿಯೂ ಕಾಣುವನು, ಅವನ ವಿಷಯವನ್ನೇ ಕೇಳುವನು, ಅವನ ಬಗ್ಗೆಯೇ ಮಾತಾಡುವನು, ಅವನನ್ನು ಕುರಿತೇ ಚಿಂತಿಸುವನು ( ೫೫ ).

## ' ಗೌಣೀ ಭಕ್ತಿ '

**ಗೌಣೀ ತ್ರಿಧಾ ಗುಣಭೇದಾದಾರ್ತಾದಿ ಭೇದಾದ್ವಾ ॥ ೫೬ ॥**

ಸಾತ್ವಿಕ, ರಾಜಸಿಕ, ತಾಮಸಿಕ ಎಂಬ ಗುಣಭೇದಗಳಿಂದ ಇಲ್ಲವೆ ಆರ್ತ, ಜಿಜ್ಞಾಸು, ಅರ್ಥಾರ್ಥಿ ಎಂಬ ಭೇದದಿಂದ ಗೌಣಭಕ್ತಿಯು ಮೂರು ಬಗೆಯಾದುದು. ( ಚಿತ್ತಶುದ್ಧಿಗಾಗಿ ಮಾಡಿದ ಭಕ್ತಿ ಸಾತ್ವಿಕ. ಸಕಾಮ ಸಾಹಂಕಾರ ಭಕ್ತಿ ರಾಜಸಿಕ. ಹಟಯುಕ್ತ ದ್ವೇಷಯುಕ್ತ ಭಕ್ತಿ ತಾಮಸಿಕ. ಸಂಕಟಗಳಿಂದ ದುಃಖಿತನಾದ ಭಕ್ತ ಆರ್ತ. ಭಗವಂತನ ಜ್ಞಾನದ ಇಚ್ಛೆಯುಳ್ಳವನು ಜಿಜ್ಞಾಸು. ಕಾಮನೆಗಳುಳ್ಳ ಭಕ್ತನು ಅರ್ಥಾರ್ಥಿ) ( ೫೬ ).

**ಉತ್ತರಸ್ಮಾದುತ್ತರಸ್ಮಾತ್ಪೂರ್ವಪೂರ್ವಾ ಶ್ರೇಯಾಯ ಭವತಿ ॥ ೫೭ ॥**

ಇವುಗಳಲ್ಲಿ ಕ್ರಮವಾಗಿ ಮುಂದಿನ ವಿಧದ ಭಕ್ತಿಗಿಂತ ಆದರ ಹಿಂದಿನ ವಿಧದ ಭಕ್ತಿ ಹೆಚ್ಚು ಶ್ರೇಯಸ್ಕರವು. ( ತಾಮಸ ಭಕ್ತಿಗಿಂತ ರಾಜಸ ಭಕ್ತಿ, ಅದಕ್ಕಿಂತ ಸಾತ್ವಿಕ ಭಕ್ತಿ ಶ್ರೇಯ-ಸ್ಕರವು. ಅರ್ಥಾರ್ಥಿ ಭಕ್ತನಿಗಿಂತ ಜಿಜ್ಞಾಸು ಭಕ್ತನು, ಅವನಿಗಿಂತ ಆರ್ತ ಭಕ್ತನು ಹೆಚ್ಚಿನ ಶ್ರೇಯಸ್ಸನ್ನು ಪಡೆಯುವನು. ) ( ೫೭ ).

## ಭಕ್ತಿಮಾರ್ಗ ಬಹು ಸುಲಭ

**ಅನ್ಯಸ್ಮಾತ್ ಸೌಲಭ್ಯಂ ಭಕ್ತೌ ॥ ೫೮ ॥ ಪ್ರಮಾಣಾಂತರ-ಸ್ಯಾನಪೇಕ್ಷಿತತ್ವಾತ್ ಸ್ವಯಂ ಪ್ರಮಾಣತ್ವಾತ್ ॥ ೫೯ ॥ ಶಾಂತಿರೂಪಾತ್ಪರಮಾನಂದರೂಪಾಚ್ಚ ॥ ೬೦ ॥**

ಅನ್ಯ ಮಾರ್ಗಗಳಿಗಿಂತ ಭಕ್ತಿಮಾರ್ಗವು ಹೆಚ್ಚು ಸುಲಭ ( ೫೮ ). ಭಕ್ತಿಮಾರ್ಗದಲ್ಲಿ ( ಇದು ಒಳ್ಳೆಯ ಮಾರ್ಗ ಎಂಬ ಬಗ್ಗೆ ) ಬೇರೆಪ್ರಮಾಣಗಳ ಅವಶ್ಯಕತೆ ಇಲ್ಲ. ಯಾಕಂದರೆ ಭಕ್ತಿಯು ( ಕೂಡಲೆ ನಿರ್ಮಲ ಆನಂದವನ್ನುಂಟು ಮಾಡುವ ದಾದ್ದರಿಂದ ) ಸ್ವಯಂಪ್ರಮಾಣವಿರುವುದು ( ೫೯ ). ಭಕ್ತಿಯು ಶಾಂತಿರೂಪವಿರುವುದರಿಂದ, ಪರಮಾನಂದರೂಪುವಿರುವುದರಿಂದ ಅದು ಅತಿ ಸುಲಭಮಾರ್ಗವು ( ೬೦ ).

## ಸಾಧನ ಹಾಗೂ ಹಲವು ವಿಧಿನಿಷೇಧಗಳು

**ಲೋಕಹಾನೌ ಚಿಂತಾ ನ ಕಾರ್ಯಾ ನಿವೇದಿತಾತ್ಮಲೋಕವೇದತ್ವಾತ್ ॥ ೬೧ ॥ ನ ತತ್ಸಿದ್ಧೌ ಲೋಕವ್ಯವಹಾರೋ ಹೇಯಃ ಕಿಂತು ಫಲತ್ಯಾಗಸ್ತತ್ಸಾಧನಂ ಚ ಕಾರ್ಯ-ಮೇವೇವ ॥ ೬೨ ॥**

ತನ್ನ ಲೌಕಿಕ ವೈದಿಕ ವ್ಯವಹಾರಗಳನ್ನು ಪೂರ್ಣವಾಗಿ ಭಗವಂತನಿಗೆ ಅರ್ಪಿಸಿ ಬಿಟ್ಟಿರುವುದರಿಂದ ಲೌಕಿಕ ವ್ಯವಹಾರಗಳಲ್ಲಿ

ಹಾನಿ ತಟ್ಟಿದರೂ ಭಕ್ತನು ಚಿಂತಿಸಕೂಡದು (೬೧). ಭಕ್ತಿ ಮಾರ್ಗದಲ್ಲಿ ಸಿದ್ಧಿ ದೊರಕಿದ ಬಳಿಕ ಸಹ ಲೋಕವ್ಯವಹಾರವನ್ನು ತಿರಸ್ಕರಿಸಿ ಬಿಡಕೂಡದು. ಆದರೆ (ಲೋಕವ್ಯವಹಾರ ಮಾಡುತ್ತಿದ್ದರೂ) ಕರ್ಮಫಲ ತ್ಯಾಗವನ್ನೂ ಅದರ ಸಾಧನವನ್ನೂ (ಆಸಕ್ತಿ ತ್ಯಾಗ) ಮಾಡಿಯೇ ತೀರಬೇಕು (೬೨).

ಸ್ತ್ರೀಧನನಾಸ್ತಿಕವೈರಿಚರಿತ್ರಂ ನ ಶ್ರವಣೀಯಮ್ ॥ ೬೩ ॥
ಅಭಿಮಾನ ಡಂಭಾದಿಕಂ ತ್ಯಾಜ್ಯಮ್ ॥ ೬೪ ॥

ಸ್ತ್ರೀ, ಸಂಪತ್ತು, ನಾಸ್ತಿಕರು, ವೈರಿಗಳು ಇವರ ಚರಿತ್ರ ವರ್ಣನಾದಿ ಕಿವಿಗೆ ಬೀಳಗೊಡಬಾರದು (೬೩). ಅಭಿಮಾನ ಮತ್ತು ದಂಭಾಚಾರ ಇವುಗಳನ್ನು ಬಿಟ್ಟುಕೊಡತಕ್ಕದ್ದು (೬೪).

ತದರ್ಪಿತಾಖಿಲಾಚಾರಃ ಸನ್ ಕಾಮಕ್ರೋಧಾಭಿಮಾನಾದಿಕಂ ತಸ್ಮಿನ್ನೇವ ಕರಣೀಯಮ್ ॥ ೬೫ ॥ ತ್ರಿರೂಪಭಂಗ ಪೂರ್ವಕಂ ನಿತ್ಯದಾಸ್ಯನಿತ್ಯಕಾಂತಾಭಜನಾತ್ಮಕಂ ವಾ ಪ್ರೇಮೈವ ಕಾರ್ಯಂ ಪ್ರೇಮೈವ ಕಾರ್ಯಮ್ ॥ ೬೬ ॥

ಅಖಿಲ ಆಚಾರಗಳನ್ನು-ಕರ್ಮಸರ್ವಸ್ವವನ್ನು-ಭಗವಂತನಿಗೆ ಅರ್ಪಣ ಮಾಡಿ ಭಕ್ತನು ಕಾಮಕ್ರೋಧ ಅಭಿಮಾನಗಳನ್ನು ತಾಳುವುದಾದರೂ ಭಗವಂತನನ್ನು ಕುರಿತೇ ತಾಳಬೇಕು (ಇತರ ವಿಷಯಗಳನ್ನು ಕುರಿತು ತಾಳಕೂಡದು) (೬೫). ಸೇವ್ಯ ಸೇವಕ ಸೇವಾ ಎಂಬ ಅಥವಾ ಪ್ರಿಯ ಪ್ರಿಯಾ ಪ್ರೀತಿ ಎಂಬ ತ್ರಿರೂಪಗಳನ್ನು ಅಳಿಸಿಬಿಡುತ್ತ (ತನ್ಮಯ ಭಾವದಿಂದ) ಭಗವಂತನ ನಿತ್ಯ ದಾಸ್ಯರೂಪವಾದ ಇಲ್ಲವೆ ಪ್ರಿಯೆಯು ಮಾಡುತ್ತಿರುವ ಪ್ರಿಯನ ನಿತ್ಯ ಆರಾಧನಾರೂಪವಾದ ಪ್ರೇಮವನ್ನೆ ಸಾಧಿಸಬೇಕು (೬೬).

## ಭಕ್ತರ ಮಹಿಮೆ

ಭಕ್ತಾಃ ಏಕಾಂತಿನೋ ಮುಖ್ಯಾಃ ॥ ೬೭ ॥

ಭಕ್ತರಲ್ಲಿ ಅನನ್ಯ ಭಕ್ತರೇ ಎಲ್ಲಕ್ಕೂ ಶ್ರೇಷ್ಠರು ( ೬೭ ).

ಕಂಠಾವರೋಧರೋಮಾಂಚಾಶ್ರುಭಿಃ ಪರಸ್ಪರಂ ಲಪಮಾನಾಃ ಪಾವಯಂತಿ ಕುಲಾನಿ ಪೃಥಿವೀಂ ಚ ॥ ೬೮ ॥ ತೀರ್ಥೀಕುರ್ವಂತಿ ತೀರ್ಥಾನಿ ಸುಕರ್ಮೀಕುರ್ವಂತಿ ಕರ್ಮಾಣಿ ಸಚ್ಛಾಸ್ತ್ರೀಕುರ್ವಂತಿ ಶಾಸ್ತ್ರಾಣಿ ॥ ೬೯ ॥ ತನ್ಮಯಾಃ ॥ ೭೦ ॥ ಮೋದಂತೇ ಪಿತರೋ ನೃತ್ಯಂತಿ ದೇವತಾಃ ಸನಾಥಾ ಚೇಯಂ ಭೂರ್ಭವತಿ ॥ ೭೧ ॥

( ಭಕ್ತಿಭಾವನೆಯ ಮೂಲಕ ) ಕುತ್ತಿಗೆ ಶಿರಗಳು ಬಿಗಿದು ಮೈಮೇಲೆ ರೋಮಾಂಚಗಳೆದ್ದು ಕಳನಳದಿಂದ ಕಣ್ಣೀರು ತುಂಬಿ ಭಗವಂತನನ್ನು ಕುರಿತು ಒಡನೊಡನೆ ಸಂಭಾಷಣ ಮಾಡುವ ಭಕ್ತರು ತಮ್ಮ ಸಕಲ ಕುಲಗಳನ್ನೂ ಈ ಪೃಥಿವಿಯನ್ನೂ ಪಾವನ ಮಾಡುವರು ( ೬೮ ). ಅವರು ತೀರ್ಥಗಳನ್ನು ಹೆಚ್ಚಿನ ತೀರ್ಥಗಳನ್ನಾಗಿ, ಸಾದಾ ಕರ್ಮಗಳನ್ನು ಸತ್ಕರ್ಮಗಳನ್ನಾಗಿ, ಶಾಸ್ತ್ರಗಳನ್ನು ಸಚ್ಛಾಸ್ತ್ರಗಳನ್ನಾಗಿ ಮಾಡಿಬಿಡುವರು ( ೬೯ ). ಯಾಕಂದರೆ ಅವರು ಭಗವನ್ಮಯರು, ಭಗವಂತನ ಸಾಕ್ಷಾತ್ಕಾರ ಪಡೆದವರು ( ೭೦ ). ಇಂಥ ಭಕ್ತರ ಪಿತರರು ಆನಂದಬಡುವರು. ಅವರನ್ನು ನೋಡಿ ದೇವತೆಗಳು ಆನಂದದಿಂದ ಕುಣಿಯುವರು. ಇವರಿಂದ ಪೃಥಿವಿಯು ಸನಾಥವಾಗುವುದು (ಸಂರಕ್ಷಿಸಲ್ಪಡುವುದು) ( ೭೧ ).

ನಾಸ್ತಿ ತೇಷು ಜಾತಿವಿದ್ಯಾರೂಪಕುಲಧನಕ್ರಿಯಾದಿಭೇದಃ ॥ ೭೨ ॥ ಯತಸ್ತದೀಯಾಃ ॥ ೭೩ ॥

ಜಾತಿ, ವಿದ್ಯೆ, ರೂಪ, ಕುಲ, ಧನ, ಕ್ರಿಯೆ ಇತ್ಯಾದಿಗಳ ಮೂಲಕ ಇರುವ ಭೇದಗಳು ಭಕ್ತರಲ್ಲಿ ಇರಲರಿಯವು ( ೭೨ ). ಯಾಕಂದರೆ ಎಲ್ಲ ಭಕ್ತರು ಭಗವಂತನ ಮಕ್ಕಳೇ ( ೭೩ ).

## ಪುನಃ ಹಲವು ವಿಧಿನಿಷೇಧಗಳು

**ವಾದೋ ನಾವಲಂಬ್ಯಃ ॥ ೭೪ ॥ ಬಾಹುಲ್ಯಾವಕಾಶಾದ ನಿಯತತ್ವಾಚ್ಚ ॥ ೭೫ ॥**

ವಾದವನ್ನು ಮಾಡಕೂಡದು ( ೭೪ ). ಯಾಕಂದರೆ ಅದು ಉದ್ದಕ್ಕೆ ಬೆಳೆಯುತ್ತ ಹೋಗುವಂತಹದು. ಮೇಲಾಗಿ ಈ ವಿಷಯವು ವಾದದಿಂದ ಬಗೆಹರಿಯದು ( ಇದು ಅನುಭವದಿಂದಲೆ ನಿರ್ಣಯಿಸತಕ್ಕ ವಿಷಯ ) ( ೭೫ ).

**ಭಕ್ತಿಶಾಸ್ತ್ರಾಣಿ ಮನನೀಯಾನಿ ತದುದ್ಬೋಧನಕರ್ಮಾಣ್ಯಪಿ ಕರಣೀಯಾನಿ ॥ ೭೬ ॥ ಸುಖದುಃಖೇಚ್ಛಾಲಾಭಾದಿ ತ್ಯಕ್ತೇ ಕಾಲೇ ಪ್ರತೀಕ್ಷ್ಯಮಾಣೇ ಕ್ಷಣಾರ್ಧಮಪಿ ವ್ಯರ್ಥಂ ನ ನೇಯಮ್ ॥ ೭೭ ॥**

ಭಕ್ತಿಶಾಸ್ತ್ರಗಳ ಮನನ ಮಾಡಬೇಕು. ಭಕ್ತಿಭಾವವನ್ನು ಎಚ್ಚರಿಸುವಂಥ ಕರ್ಮಗಳನ್ನೂ ಮಾಡಬೇಕು (೭೬). ಸುಖ ದುಃಖಗಳು ಮುಗಿಯುವವು, ಇಷ್ಟ ವಸ್ತುವಿನ ಲಾಭವಾಗುವುದು, ಇವೆಲ್ಲ ಆದ ಬಳಿಕ ವೇಳೆ ದೊರೆಯುವುದು ಎಂದು ಹಾದೀ ಕಾಯುತ್ತ ವ್ಯರ್ಥವಾಗಿ ಒಂದರೆಕ್ಷಣವನ್ನಾದರೂ ( ಭಕ್ತಿಸಾಧನವಿಲ್ಲದೆ) ಕಳೆಯಕೂಡದು ( ಹಾಗೆ ಹಾದೀ ಕಾಯ್ದರೆ ಸಾಯುವವರೆಗೆ ವೇಳೆ ದೊರೆಯದು ) ( ೭೭ ).

**ಅಹಿಂಸಾಸತ್ಯಶೌಚದಯಾಸ್ತಿಕ್ಯಾದಿ ಚಾರಿತ್ರ್ಯಾಣಿ ಪರಿಪಾಲನೀಯಾನಿ ॥೭೮॥ ಸರ್ವದಾ ಸರ್ವಭಾವೇನ ನಿಶ್ಚಿಂತಿತೈರ್ಭಗವಾನೇವ ಭಜನೀಯಃ ॥೭೯॥ ಸ ಕೀರ್ತ್ಯಮಾನಃ ಶೀಘ್ರಮೇವಾವಿರ್ಭವತಿ ಅನುಭಾವಯತಿ ಚ ಭಕ್ತಾನ್ ॥ ೮೦ ॥ ತ್ರಿಸತ್ಯಸ್ಯ ಭಕ್ತಿರೇವ ಗರೀಯಸೀ ಭಕ್ತಿರೇವ ಗರೀಯಸೀ ॥ ೮೧ ॥**

ಭಕ್ತನು ಅಹಿಂಸೆ, ಸತ್ಯ, ಶುಚಿತ್ವ, ದಯೆ, ಆಸ್ತಿಕ್ಯಬುದ್ಧಿ ಇತ್ಯಾದಿ ಶೀಲಗಳನ್ನು ಪಾಲಿಸಲಿಕ್ಕೆಬೇಕು ( ೭೮ ). ನಿಶ್ಚಿಂತ

ನಾಗಿ ಭಾವಸರ್ವಸ್ವದಿಂದ ನಿರಂತರ ಭಗವಂತನನ್ನೇ ಭಜಿಸ ಬೇಕು (೭೯). ಭಜಿಸಲ್ಪಟ್ಟ ಭಗವಂತನು ತೀವ್ರವೆ ಪ್ರತ್ಯಕ್ಷ ನಾಗುವನು, ಭಕ್ತರಿಗೆ ತನ್ನ ಸಾಕ್ಷಾತ್ಕಾರ ಮಾಡಿಕೊಡುವನು (೮೦). ತ್ರಿಕಾಲದಲ್ಲಿಯೂ ಏಕರೂಪನಿರುವ ಭಗವಂತನ ಭಕ್ತಿಯೇ ಶ್ರೇಷ್ಠವು, ಭಕ್ತಿಯೇ ಶ್ರೇಷ್ಠವು (೮೧).

## ಭಕ್ತಿರೂಪಗಳು

**ಗುಣಮಹಾತ್ಮ್ಯಾಸಕ್ತಿ ರೂಪಾಸಕ್ತಿ ಪೂಜಾಸಕ್ತಿ ಸ್ಮರಣಾ ಸಕ್ತಿ ದಾಸ್ಯಾಸಕ್ತಿ ಸಖ್ಯಾಸಕ್ತಿ ವಾತ್ಸಲ್ಯಾಸಕ್ತಿ ಕಾಂತಾಸಕ್ತಿ ಆತ್ಮನಿವೇದನಾಸಕ್ತಿ ತನ್ಮಯಾಸಕ್ತಿ ಪರಮವಿರಹಾಸಕ್ತಿ ರೂಪಾ ಏಕಧಾಪ್ಯೇಕಾದಶಧಾ ಭವತಿ ॥ ೮೨ ॥**

ಪ್ರೇಮರೂಪ ಭಕ್ತಿಯು ಒಂದೇ ಒಂದು. ಆದರೆ ಅದು ಭಗವದ್ಗುಣಮಾಹಾತ್ಮ್ಯದಲ್ಲಿ ಆಸಕ್ತಿ, ಅವನ ರೂಪದಲ್ಲಿ ಆಸಕ್ತಿ, ಪೂಜೆಯಲ್ಲಿ ಆಸಕ್ತಿ, ಸಖ್ಯದಲ್ಲಿ ಆಸಕ್ತಿ, ವಾತ್ಸಲ್ಯದಲ್ಲಿ (ತಂದೆ ತಾಯಿ ಹಾಗೂ ಮಕ್ಕಳಲ್ಲಿ ಇರುವ ಪ್ರೇಮ) ಆಸಕ್ತಿ, ಕಾಂತಾಸಕ್ತಿ (ಪ್ರೀತಿಪಾತ್ರರಲ್ಲಿರುವ ಪ್ರೇಮ), ಆತ್ಮನಿವೇದನ ದಲ್ಲಿ (ಸರ್ವಾರ್ಪಣವಲ್ಲಿ) ಆಸಕ್ತಿ, ತನ್ಮಯತೆಯಲ್ಲಿ (ಏಕ ರೂಪನಾಗುವುದರಲ್ಲಿ) ಆಸಕ್ತಿ, ಪರಮವಿರಹದಲ್ಲಿ (ಇದು ಅತ್ಯಂತ ತೀವ್ರ ಆಸಕ್ತಿ ಎಂಬ ಅನುಭವವಿದೆ) ಆಸಕ್ತಿ, ಹೀಗೆ ಹನ್ನೊಂದು ಬಗೆಯಾಗಿ ವ್ಯಕ್ತವಾಗುವದು (೮೨).

## ಆಚಾರ್ಯರ ವಚನ

**ಇತ್ಯೇವಂ ವದಂತಿ ಜನಜಲ್ಪನಿರ್ಭಯಾ ಏಕಮತಾಃ ಕುಮಾರವ್ಯಾಸ ಶುಕಶಾಂಡಿಲ್ಯ ಗರ್ಗವಿಷ್ಣು ಕೌಂಡಿಲ್ಯ ಶೇಷೋದ್ಧವಾರುಣಿಬಲಿಹನುಮದ್ವಿಭೀಷಣಾದಯೋ ಭಕ್ತಾ ಚಾರ್ಯಾಃ ॥ ೮೩ ॥**

ಸನತ್ಕುಮಾರ, ವ್ಯಾಸ, ಶುಕ, ಶಾಂಡಿಲ್ಯ, ಗರ್ಗ, ವಿಷ್ಣು, ಕೌಂಡಿಲ್ಯ, ಶೇಷ, ಉದ್ಧವ, ಆರುಣಿ, ಬಲಿ, ಹನುಮಂತ ವಿಭೀಷಣ ಇತ್ಯಾದಿ ಭಕ್ತಾಚಾರ್ಯರು ಜನರ ನಿಂದಾಸ್ತುತಿಗಳ ಭಯವಿಲ್ಲದೆ ಒಮ್ಮತದಿಂದ ಇದೇರೀತಿ ಹೇಳುವರು (೮೩).

## ಮಹಾಫಲ

ಯ ಇದಂ ನಾರದಪ್ರೋಕ್ತಂ ಶಿವಾನುಶಾಸನಂ ವಿಶ್ವಸಿತಿ ಶ್ರದ್ಧತ್ತೇ ಸ ಭಕ್ತಿಮಾನ್ಭವತಿ ಸ ಪ್ರೇಷ್ಠಂ ಲಭತೇ ಸ ಪ್ರೇಷ್ಠಂ ಲಭತೇ ॥ ೮೪ ॥

ನಾರದರಿಂದ ಹೇಳಲ್ಪಟ್ಟ ಈ ಕಲ್ಯಾಣಮಯ ಉಪದೇಶದಲ್ಲಿ ವಿಶ್ವಸಿಸುವವನು, ಶ್ರದ್ಧೆಯಿಟ್ಟವನು ಭಕ್ತಿಯುಳ್ಳವನಾಗುವನು. ಅವನು ತನ್ನ ಪ್ರೀತಿಯ ವಸ್ತುವನ್ನು (ಭಗವಂತನನ್ನು) ಪಡೆಯುವನು, ಪಡೆಯುವನು (೮೪).

# ಶಾಂಡಿಲ್ಯ ಭಕ್ತಿಸೂತ್ರಗಳು

## ಸಾರಸರ್ವಸ್ವ

ಬ್ರಹ್ಮಸೂತ್ರಗಳು 'ಅಥಾತೋ ಬ್ರಹ್ಮಜಿಜ್ಞಾಸಾ' ಎಂದು ಪ್ರಾರಂಭವಾಗಿವೆ. ಅದೇ ರೀತಿ ಶಾಂಡಿಲ್ಯನ ಭಕ್ತಿ ಸೂತ್ರಗಳು 'ಅಥಾತೋ ಭಕ್ತಿ ಜಿಜ್ಞಾಸಾ' ಎಂದು ಮೊದಲು ಮಾಡಿವೆ. ಈ ಸೂತ್ರಗಳ ಸಾರಸರ್ವಸ್ವವನ್ನು ಏಕಧಾರೆಯಾಗಿ ಇಲ್ಲಿ ಕೊಡಲೆತ್ನಿಸಿದ್ದೇನೆ. ಮುಂದೆ ಆ ಸೂತ್ರಗಳ ಅಭ್ಯಾಸಕ್ಕೆ ಈ ಸಾರವು ಸಹಾಯಕವಾಗಬಹುದೆಂದು ಆಶಿಸುತ್ತೇನೆ.

ಭಗವಂತನನ್ನು ಕುರಿತು ಆತ್ಯಂತಿಕವಾದ ಅನುರಕ್ತಿಯೆ-ಪ್ರೇಮವೆ— ಭಕ್ತಿಯೆನಿಸುವದು. ಭಗವಂತನಲ್ಲಿ ಏಕಚಿತ್ತನಾದವನು ಅಮೃತತ್ವವನ್ನು ಪಡೆಯುವನೆಂದು ಹೇಳಲಾಗಿದೆ. ಆದುದರಿಂದ ಈ ಭಕ್ತಿ ಎಂಬ ವಿಷಯವು ಬಹಳ ಮಹತ್ವದ್ದಿದೆ.

ಭಕ್ತಿಯೆಂದರೆ ಜ್ಞಾನವಲ್ಲ. ದ್ವೇಷಿಗಳಿಗೂ ಜ್ಞಾನ (ಬೌದ್ಧಿಕ) ವಿರಬಲ್ಲದು ಮೇಲಾಗಿ ಭಕ್ತಿಯು ಜ್ಞಾನಕ್ಕಿಂತ ಶ್ರೇಷ್ಠವು.

ಭಕ್ತಿಯೆಂಬುದೊಂದು ರಾಗವೆಂದು (ಭಾವ) ಹೇಳಬಹುದು. ಅದು ದ್ವೇಷಭಾವದ ಪ್ರತಿರೋಧಿಯು. ಅದಕ್ಕೆ 'ರಸ' ವೆಂದು ಕೂಡ ಅನ್ನುವರು.

ಭಕ್ತಿಯೆಂಬುದೊಂದು ರಾಗವಿರುವುದರಿಂದ ಮತ್ತು ರಾಗದ್ವೇಷಗಳನ್ನು ಬಿಡಬೇಕು ಎಂದು ಹೇಳಿದ್ದರಿಂದ ಭಕ್ತಿಯೂ ತ್ಯಾಜ್ಯವು ಎಂದು ಹಲವರು ಅನ್ನಬಹುದು. ಆದರೆ ಭಕ್ತಿಯ ವಿಷಯವು ಭಗವಂತನೆ ಇರುವುದರಿಂದ ಇದು ತ್ಯಾಜ್ಯವಲ್ಲ. ಸಂಗವು ತ್ಯಾಜ್ಯವಿದ್ದರೂ ಸತ್ಸಂಗವು ತ್ಯಾಜ್ಯವಿಲ್ಲ.

ಭಕ್ತಿಯು ಕ್ರಿಯೆಯಲ್ಲ. ಯಾಕಂದರೆ ಕ್ರಿಯೆಗೆ ಅವಶ್ಯವಿದ್ದ ಸಂಕಲ್ಪ ನಿಶ್ಚಯಾದಿಗಳು ಇಲ್ಲಿ ಇರುವುದಿಲ್ಲ. ಇದು ಕ್ರಿಯೆಯಲ್ಲದ್ದರಿಂದ ಇದರ ಫಲವು ಅನಂತವಿರುವದು. ಇಂಥ ಕ್ರಿಯೆಗೆ ಇಂಥ ಫಲ ಎಂದು ನಿಶ್ಚಯವಾಗಿರುವುದರಿಂದ ಕ್ರಿಯೆಯ ಫಲವೆಲ್ಲ ನಿಯತವು, ಭಕ್ತಿಫಲವು ಅನಂತವು.

ಭಕ್ತಿ ಎಂಬುದು ಎಲ್ಲಕ್ಕೂ ಮುಖ್ಯವು. ಜ್ಞಾನ ಕ್ರಿಯಾದಿಗಳು ಅದಕ್ಕೆ ಪೋಷಕ.

ದರ್ಶನಾದಿಗಳಿಂದ ಅಮೃತತ್ವವು ದೊರೆಯದು. ದರ್ಶನವು ಭಕ್ತಿಗೆ ಸಹಾಯಕವು, ಸ್ವತಂತ್ರ ಸಾಧನವಲ್ಲ.

ಭಕ್ತಿಯು ಎಲ್ಲಕ್ಕೂ ಮುಖ್ಯವು ಎಂಬುದು ಗೋಪಿಕೆಯರ ಉದಾಹರಣೆಯಿಂದ ಸಿದ್ಧವಾಗುವದು. ಅವರು ಕೇವಲ ಶುದ್ಧ ಭಕ್ತಿಯಿಂದ ಮುಕ್ತರಾದರು. ಯೋಗವೆಂಬುದು ಭಕ್ತಿ ಜ್ಞಾನ ಇವೆರಡಕ್ಕೂ ಸಹಾಯಕವು.

ಕರ್ಮಜ್ಞಾನಯೋಗ ಇವುಗಳಿಗಿಂತ ಭಕ್ತಿ ಹೆಚ್ಚಿನದು ಗೀತೆಯಲ್ಲಿಯ ಸಂವಾದರೂಪ ವಿವೇಚನೆಯಿಂದ ಇದು ಸಿದ್ಧ ಮಾಡಲಾಗಿದೆ.

ಭಕ್ತಿಯು ಶ್ರದ್ಧೆಯಲ್ಲ. ಶ್ರದ್ಧೆ ಎಂಬುದು ಅನೇಕ ವಿಷಯಗಳಲ್ಲಿ ಇರಬಲ್ಲದು. ಭಕ್ತಿಯು ಭಗವಂತನನ್ನು ಕುರಿತು ಮಾತ್ರ ಇರುವದು.

ಬ್ರಹ್ಮಕಾಂಡದಲ್ಲಿ (ಜ್ಞಾನಕಾಂಡ ಅಥವಾ ಉತ್ತರ ಮೀಮಾಂಸೆ) ಭಕ್ತಿಯೇ ಮುಖ್ಯ ವಿಷಯುವು. ಜ್ಞಾನವು ಕರ್ಮಕಾಂಡ ಜ್ಞಾನಕಾಂಡಗಳಲ್ಲಿ ಹೇಳಲಾಗಿದೆ.

ಸಂಪೂರ್ಣ ಚಿತ್ತಶುದ್ಧಿಯಾಗುವ ವರೆಗೆ ಜ್ಞಾನಸಾಧನ ವನ್ನು ನಡೆಸಲೇಬೇಕು. ಇಲ್ಲಿ ಜ್ಞಾನವೆಂದರೆ ಭಗವಂತನ ಐಶ್ವರ್ಯದ ಜ್ಞಾನ ಎಂದು ಕಾಶ್ಯಪನ ಮತವು, ಆತ್ಮನ ಜ್ಞಾನವೆಂದು ಬಾದರಾಯಣನ ಮತವು. ಎರಡೂ ವಸ್ತುಗಳ ಜ್ಞಾನ ಎಂದು ಶಾಂಡಿಲ್ಯನ ಮತವು. ಈ ಎರಡೂ ಜ್ಞಾನಗಳು ಪರಸ್ಪರ ಬಾಧಕವಿಲ್ಲ.

ಭಗವಂತನು ಕ್ಲೇಶಾದಿಗಳಿಗೆ ಗುರಿಯಾಗುವುದಿಲ್ಲ. ಐಶ್ವ ರ್ಯವು ಅವನ ಸ್ವಭಾವವೆ ಇರುವುದರಿಂದ ಅದಕ್ಕಾದರೂ ಬಾಧೆ ಬರದು. ಜೀವಗಳಾದರೂ ಅವನ ಅಂಶಗಳಿರುವುದ ರಿಂದ ಕ್ಲೇಶಾದಿಗಳು ಉಪಾಧಿಗಳ ಮೂಲಕ ಉಂಟಾಗುವವು ಹೊರತು ಜೀವಗಳ ಮೂಲ ಸ್ವಭಾವದಲ್ಲಿ ಅವು ಇಲ್ಲ.

ಪ್ರಲಯವಾಯಿತೆಂದರೆ ಭಗವಂತನ ಐಶ್ವರ್ಯದ ಉಪ ಯೋಗವೇನು ಎಂದು ಕೇಳಬಹುದು. ಆತ್ಯಂತಿಕ ಪ್ರಲಯ ವಾಗುವುದೇ ಇಲ್ಲ. ಪುನಃ ಸೃಷ್ಟಿಯಾಗೇ ಆಗುವುದು. ಆದುದ ರಿಂದ ಭಗವಂತನ ಐಶ್ವರ್ಯವಾದರೂ ಅನಾದಿ ಹಾಗೂ ಅನಂತವಿರುವದು.

ಭಗವಂತನು ಅವಿಕೃತನು. ಅವನು ಪ್ರಕೃತಿಯ ಮುಖಾಂತರ ವರ್ತಿಸುವನು. ಅವನು ಕೇವಲ ಜಗದಾ ಧಾರನು, ಸೃಷ್ಟಿಯಾಗಲು ಪುರುಷ (ಭಗವಂತ) ಪ್ರಕೃ ಎರಡೂ ಅವಶ್ಯ. ವಿಶ್ವದಲ್ಲಿ ಚಿತ್ತ ಮತ್ತು ಅಚಿತ್ತ ಇವೆರಡೆ (ಪುರುಷ ಮತ್ತು ಪ್ರಕೃತಿ) ಇರುವವು. ಅವೆರಡೂ ಅನಾದಿ

ಹಾಗೂ ಅನಂತವಿರುವವು. ಪ್ರಕೃತಿಯಲ್ಲಿ ಶಕ್ತಿ ಎಂಬುದು ಇರುವುದರಿಂದ ಅದು ಇಲ್ಲೇ ಇಲ್ಲ ಎಂದು ಹೇಳಲಾಗದು.

ಇನ್ನು ಚಿತ್ತಶುದ್ಧಿಯನ್ನು ಹಲವು ಲಕ್ಷಣಗಳಿಂದ ತಿಳಿದು ಕೊಳ್ಳಬೇಕು. ಭಗವಂತನನ್ನು ಕುರಿತು ಸಮ್ಮಾನ, ಬಹು ಮಾನ, ಪ್ರೀತಿ, ವಿರಹ, ಅನ್ಯರ ಬಗ್ಗೆ ಸಂಶಯ, ಭಗವಂತನ ಮಹಿಮಾ ವರ್ಣನೆ, ಅವನಿಗಾಗಿ ಜೀವನ, ತನ್ಮಯತೆ, ಸರ್ವವೂ ಅವನದೇ ಎಂಬ ಭಾವ, ಶರಣಾಗತಿ ಇವು ಚಿತ್ತ ಶುದ್ಧಿಯ ಲಕ್ಷಣಗಳು ಎಂದು ಸ್ಮೃತ್ಯಾದಿ ಗ್ರಂಥಗಳಲ್ಲಿ ಹೇಳ ಲಾಗಿವೆ.

ಇನ್ನು ಭಕ್ತಿ ಎಂಬುದು ಭಗವಂತನನ್ನು ಕುರಿತು ಮಾತ್ರ ಇರಬೇಕೆಂದಲ್ಲ. ಅವನ ಅವತಾರಗಳಲ್ಲಿಯೂ ಭಕ್ತಿ ಇರ ಲ್ಲದು. ಭಗವಂತನು ತನ್ನ ಶಕ್ತಿಯಿಂದ ಆವಿರ್ಭವಿಸು ವನು. ಮುಖ್ಯವಾಗಿ ಅವನು ಕಾರುಣ್ಯವಶಾತ್ ಅವತರಿಸು ವನು. ಆದರೆ ವಿಭೂತಿಗಳು ಭಕ್ತಿವಿಷಯಗಳಲ್ಲ. ಉದಾ: ರಾಜನು ಭಗವಂತನ ವಿಭೂತಿಯು. ಆದರೆ ಭಗವಂತನ ಸೇವೆಯಂತೆ ರಾಜನ ಸೇವೆ ಮಾಡಕೂಡದು ಎಂದು ನಿಷೇಧವು ಹೇಳಲಾಗಿದೆ. ಗೀತೆಯಲ್ಲಿಯ ವಿಭೂತಿಯೋಗದಲ್ಲಿ (ವೃಷ್ಣೀ ನಾಂ ವಾಸುದೇವೋಽಸ್ಮಿ) ವಾಸುದೇವನು ಒಂದು ವಿಭೂತಿ ಎಂದು ಹೇಳಲಾಗಿದ್ದರೂ ಅವನು ನಿಜವಾಗಿ ಅವತಾರನೇ. ವೃಷ್ಣಿಕುಲದಲ್ಲಿ ಯಾರು ಶ್ರೇಷ್ಠ ಎಂಬುದನ್ನು ಹೇಳುವದಷ್ಟೇ ಇಲ್ಲಿಯ ಉದ್ದೇಶವು. ಆದುದರಿಂದ ವಾಸುದೇವನು ಅವತಾರ ನೆಂದೇ ತಿಳಿಯಬೇಕು. ಹಾಗೂ ಎಲ್ಲ ಪ್ರಸಿದ್ಧ ಅವತಾರ ಗಳನ್ನು ಭಗವಂತನಂತೆಯೆ ಪೂಜಿಸಬೇಕು.

ಇನ್ನು ಗೌಣೀಭಕ್ತಿಯು ಪರಾ ಅಥವಾ ಮುಖ್ಯ ಭಕ್ತಿಯ ಸಿದ್ಧಿಗಾಗಿಯೆ ಇರುವದು. ಭಗವಂತನ ನಾಮಸಂಕೀರ್ತ

ನಾದಿಗಳು ಅವನ ಬಗ್ಗೆ ಪ್ರೇಮವನ್ನುಂಟು ಮಾಡುವವು. ನಾಮಸಂಕೀರ್ತನವಲ್ಲದೆ ಭಕ್ತಿಯು ಇನ್ನು ಅನೇಕ ವಿಧಗಳು–ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ ಇತ್ಯಾದಿ ಇವೆ. ಅವು ವೇದಾದಿ ಗ್ರಂಥಗಳಲ್ಲಿ ಉಲ್ಲೇಖಿಸಲ್ಪಟ್ಟಿವೆ. ಅವುಗಳಿಂದ ಚಿತ್ತಶುದ್ಧಿಯಾಗಿ ಭಕ್ತನು ಪವಿತ್ರನಾಗುವನು. ಮುಖ್ಯ ಭಕ್ತಿಯೊಡನೆ ಅವೂ ಇದ್ದರೆ ಹೆಚ್ಚಿನ ಫಲವು ದೊರೆಯುವದೆಂದು ಹಲವರ ಅಭಿಪ್ರಾಯ. ಹಾಗೇನೂ ಇಲ್ಲ, ಸಿಗತಕ್ಕಷ್ಟೇ ಫಲವು ಲಭಿಸುವದು ಎಂದು ಜೈಮಿನಿಯ ಮತವು.

ಈ ವಿವಿಧ ಭಕ್ತಿವಿಧಗಳನ್ನು ಯಥಾಪ್ರಸಂಗವಾಗಿ ಆಚರಿಸಬೇಕು. ಇವುಗಳಲ್ಲಿ ಒಂದೇ ವಿಧವು ಸಹ ಸಾಕಷ್ಟು ಬಲವುಳ್ಳದ್ದು ಇರಬಲ್ಲದು ಹಾಗೂ ಭಗವಂತನು ಅದರಿಂದ ಸಂತುಷ್ಟನಾಗಿ ಇಷ್ಟ ಫಲವಾದ ಅಮೃತತ್ವವನ್ನು ದಯಪಾಲಿಸಬಹುದು.

ನಿಃಸಂಗ ಹಾಗೂ ನಿರಾಸಕ್ತರಾಗಿರುವುದೆ ಸರ್ವಾರ್ಪಣದ ಮುಖ್ಯ ಸಾಧನವು.

ಏಕಾಗ್ರತೆ ಸಾಧಿಸಲು ಸುಲಭವಾಗುವುದೆಂದು ಧ್ಯಾನವು ಹೇಳಲಾಗಿದೆ.

ಭಗವಂತನಿಗೆ ಅರ್ಪಿಸಿದುದನ್ನು ಭಕ್ತನು ಸ್ವತಃ ಪುನಃ ಉಪಯೋಗಿಸಬಹುದು. ಪತ್ರಂ ಪುಷ್ಪಂ ಎಂದು ಹೇಳುವಾಗ ನಾಲ್ಕೇ ಪದಾರ್ಥಗಳು ಹೇಳಲ್ಪಟ್ಟಿದ್ದರೂ ಸರ್ವಸ್ವವನ್ನು ಅರ್ಪಿಸಬೇಕೆಂದೇ ಅದರ ಅಭಿಪ್ರಾಯವು.

ಬೇರೆ ಸಾಮಾನ್ಯ ಕ್ರಿಯೆಗಳಿಗಿಂತ ಭಕ್ತಿಯ ಮೂಲಕ ಮಾಡಿದ ಕೆಲಸಗಳೆಲ್ಲ ಶ್ರೇಷ್ಠವಾದವುಗಳು.

ಗೌಣೀಭಕ್ತಿಯು ಆರ್ತ, ಜಿಜ್ಞಾಸು ಮತ್ತು ಅರ್ಥಾರ್ಥಿ ಎಂದು ಮೂರು ವಿಧವಿರುವದು. ಶ್ರವಣ ಸ್ಮರಣಾದಿ ಭಕ್ತಿ ವಿಧಗಳು ಮುಖ್ಯ ಭಕ್ತಿಯು ಅಂಗವಾಗಿಯೂ ಇರಬಲ್ಲವು. ಸ್ವತಂತ್ರ ಫಲವನ್ನೂ ದೊರಕಿಸಿ ಕೊಡಬಲ್ಲವು. ಆರ್ತಭಕ್ತಿಯಲ್ಲಿ ಸ್ಮರಣಾದಿಗಳು ಪ್ರಾಯಶ್ಚಿತ್ತ ರೂಪವಾಗಿರುವವು. ಇವು ಸಾಯುವವರೆಗೆ ನಡೆಯತಕ್ಕ ಸಾಧನಗಳಾಗಿರುವುವು ಹಾಗೂ ಎಲ್ಲ ಪಾಪಗಳನ್ನು ತೊಳೆಯುವ ಸಾಮರ್ಥ್ಯವು ಇವುಗಳಲ್ಲಿರುವದು. ಇವು ಕಾಣಲಿಕ್ಕೆ ತೀರ ಚಿಲ್ಲರೆ ಕಂಡರೂ ಭಕ್ತನು ಶ್ರೇಷ್ಠಾಧಿಕಾರಿಯಿರುವುದರಿಂದ ಮಹಾಫಲಗಳನ್ನು—ಪಾಪಕ್ಷಾಲನಾದಿ ಕೊಡಬಲ್ಲವು. ಪ್ರಾಯಶ್ಚಿತ್ತದ ಅನ್ಯ ಧರ್ಮಗಳು ಇವುಗಳಲ್ಲಿರದಿದ್ದರೂ ಪಾಪಕ್ಷಾಲನವೆಂಬ ಮುಖ್ಯ ಧರ್ಮವು ಇವುಗಳಲ್ಲಿ ಪರಿಪೂರ್ಣತೆಯಿಂದ ಇರುವದು.

ಈ ಭಕ್ತಿಮಾರ್ಗದಲ್ಲಿ ಅತಿಶಯ ಹೀನಜಾತರಿಗೆ ಸಹ ಮುಕ್ತದ್ವಾರವಿರುವದು. ಈ ಮಾರ್ಗದಲ್ಲಿ ಪೂರ್ಣತ್ವವನ್ನು ಪಡೆಯದೆ ತೆರಳಿದವರು ದೇವಲೋಕದಲ್ಲಿ ಇದರ ಸಾಧನವನ್ನು ಮುಂದರಿಸುವರು. ಜೀವನು ಭಕ್ತಿಯಿಂದ ತನ್ನ ಮಾರ್ಗವನ್ನು ನಡೆದು ಹೋಗುವನು ಎಂಬುದರ ಅರ್ಥವು ಅದೇ ಇರುವದು.

ಮಹಾಪಾತಕಿಗಳಿಗೆ ಆರ್ತಭಕ್ತಿಯು ಬಹಳ ಯೋಗ್ಯವಾದುದು.

ಏಕಾಂತಿಕ ಭಕ್ತಿಯೆ ಎಲ್ಲಕ್ಕೂ ಶ್ರೇಷ್ಠವಾದುದು ಎಂದು ಗೀತೆಯ ಉಕ್ತಿ ಇರುವದು. ಪರಾಭಕ್ತಿಯಿಂದ ಮುಕ್ತಿಯು ದೊರಕುವದು.

ಇನ್ನು ಜೀವ, ಜಗತ್ತು ಮತ್ತು ಪರಮೇಶ್ವರ ಇವರ ಸಂಬಂಧ ಹೇಗೆ ಇರುವದು ಇದರ ವಿಚಾರವು. ಈ ವ್ಯಕ್ತ

ಸೃಷ್ಟಿಯು ಪರಮಾತ್ಮನ ಸ್ವರೂಪವೆ ಆದುದರಿಂದ ಇದು ಪರಮಾತ್ಮನಿಂದ ಭಿನ್ನವಿಲ್ಲ. ಪರಮಾತ್ಮನ ಶಕ್ತಿಯು ಮಾಯೆ ಎನಿಸುವದು. ಅದು ಸೃಷ್ಟಿರೂಪದಿಂದ ವ್ಯಕ್ತವಾಗುವದು. ಸೃಷ್ಟಿಯನ್ನೆಲ್ಲ ಅದು ವ್ಯಾಪಿಸಿರುವದು.

ಉಚ್ಚಾವಚ ಸೃಷ್ಟಿಯನ್ನೆಲ್ಲ ನಿರ್ಮಿಸಿ ಜೀವಗಳಿಗೆ ಮುಕ್ತಿಮಾರ್ಗವನ್ನು ತೋರಿಸುವುದಕ್ಕಾಗಿ ಪರಮಾತ್ಮನು ವೇದಗಳನ್ನು ನಿರ್ಮಿಸಿದನು. ವೇದಗಳಲ್ಲಿ ಹಿಂಸೆ ಅಹಿಂಸೆ ಮುಂತಾದವುಗಳನ್ನು ಕುರಿತು ಮಿಶ್ರವಾದ ಅಥವಾ ಸಂದಿಗ್ಧವಾದ ಉಪದೇಶವಿದೆ ಎಂದು ಹಲವರು ಆಕ್ಷೇಪಿಸುವರು. ಆದರೆ ಅಂಥ ಉಪದೇಶವು ತೀರ ಅಲ್ಪಪ್ರಮಾಣದಲ್ಲಿರುವದು.

ಫಲವೆಂಬುದೆಲ್ಲ ಪರಮಾತ್ಮನಿಂದಲೆ ಪ್ರಾಪ್ತವಾಗುವದು.

ಸೃಷ್ಟಿಯು ಉತ್ಕ್ರಮದಿಂದ ಹುಟ್ಟಿ ವ್ಯುತ್ಕ್ರಮದಿಂದ ಲಯಹೊಂದುವದು.

ಜೀವ ಈಶ್ವರರ ಐಕ್ಯ ಅನೈಕ್ಯಗಳು ಉಪಾಧಿ ಮೂಲಕ ತೋರುವವು. ಅವು ಪ್ರತ್ಯೇಕ ಅಥವಾ ಭಿನ್ನವಿಲ್ಲ. ಜೀವಗಳು ಈಶ್ವರನಿಂದ ಭಿನ್ನವಿದ್ದದಾದರೆ ಅವುಗಳಲ್ಲಿ ಪರಸ್ಪರ ಸಂಬಂಧವೆ ಇಲ್ಲದಂತಾಗುವದು. ಅವು ವಿಕಾರಕ್ಕೂ ಗುರಿಯಾಗುವುದಿಲ್ಲ. ಬುದ್ಧ್ಯಾದಿ ಅವುಗಳ ಕಾರಣಗಳು ಮಾತ್ರ ವಿಕಾರಹೊಂದುವವು.

ಅನನ್ಯ ಭಕ್ತಿಯಿಂದ ಭಗವಂತನ ಐಕ್ಯಾನುಭವವಾಗುವದು. ಒಬ್ಬನು ಜೀವನ್ಮುಕ್ತನಾದರೂ ಅವನ ದೇಹವು ಸಾಯುವ ವರೆಗೆ ಹಾಗೆಯೆ ಜೀವಿಸುವದು.

ಈ ಸಂಸಾರಕ್ಕೆ ಅಭಕ್ತಿಯೇ ಕಾರಣವು ಹೊರತು ಕೇವಲ ಅಜ್ಞಾನವು ಆದರ ಕಾರಣವಲ್ಲ.

ಶಬ್ದ, ಅನುಮಾನ, ಪ್ರತ್ಯಕ್ಷ ಈ ಮೂರು ಪ್ರಮಾಣಗಳ ಜೀವನ ಕಣ್ಣುಗಳು– ಜ್ಞಾನಸಾಧನಗಳು.

ಸೃಷ್ಟಿ ಹಾಗೂ ಲಯ ಇವು ವಿಕಾರಗಳು. ಕ್ರಿಯೆ ಹಾಗು ಫಲ ಇವುಗಳ ಸಂಯೋಗದಿಂದ ಈ ವಿಕಾರಗಳು ಆಗುವವು ಮೂಲ ವಸ್ತುವಿಗೆ ಆದರಿಂದ ಏನೂ ಹಾನಿಯಿಲ್ಲ.

# ಶಾಂಡಿಲ್ಯ ಭಕ್ತಿಸೂತ್ರಗಳು

## ಪ್ರಕರಣ ೧. ಭಾಗ ೧.

### ಭಕ್ತಿಯ ಜಿಜ್ಞಾಸೆ

ಅಥಾತೋ ಭಕ್ತಿಜಿಜ್ಞಾಸಾ ॥೧. ೧. ೧॥

(ಎಲ್ಲರೂ ಮುಮುಕ್ಷುಗಳಿರುವುದರಿಂದ ಹಾಗೂ ಮುಕ್ತಿಯು ಭಕ್ತಿಯಿಂದ ದೊರೆಯುತ್ತಿರುವುದರಿಂದ) ಇನ್ನು ಮುಂದೆ ಭಕ್ತಿಯನ್ನರಿಯುವ ಇಚ್ಛೆ ಇದೆ (ಅದನ್ನು ತೃಪ್ತಪಡಿಸುವ) (೧. ೧. ೧) ೧

### ಭಕ್ತಿಯ ವ್ಯಾಖ್ಯೆ

ಸಾ ಪರಾನುರಕ್ತಿರೀಶ್ವರೇ ॥೧. ೧. ೨॥

ಭಗವಂತನನ್ನು ಕುರಿತು ಎಲ್ಲಕ್ಕೂ ಹೆಚ್ಚಿನ ಪ್ರೇಮವು ಭಕ್ತಿಯೆನಿಸುವದು (೧. ೧. ೨) ೨

### ಭಕ್ತಿಯಿಂದ ಅಮೃತತ್ವ

ತತ್ಸಂಸ್ಥಸ್ಯಾಮೃತತ್ವೋಪದೇಶಾತ್ ॥೧. ೧. ೩॥

ಭಗವಂತನಲ್ಲಿ ಸ್ಥಿರಮನಸ್ಕನಾದ ಭಕ್ತನಿಗೆ ಅಮೃತತ್ವವು ಪ್ರಾಪ್ತವಾಗುವುದೆಂದು (ಬ್ರಹ್ಮಸಂಸ್ಥೋಽಮೃತತ್ವಮೇತಿ ಛಾಂದೋಗ್ಯ ೨. ೨೩. ೧) ಹೇಳಲಾಗಿದೆ (೧. ೧. ೩) ೩

## ಭಕ್ತಿಯು ಜ್ಞಾನವಲ್ಲ

**ಜ್ಞಾನಮಿತಿ ಚೇನ್ನ ದ್ವಿಷತೋಽಪಿ ಜ್ಞಾನಸ್ಯ ತದಸಂಸ್ಥಿತೇಃ ॥ ೧. ೧. ೪ ॥**

ಭಕ್ತಿಯೆಂದರೆ (ಭಗವಂತನಲ್ಲಿ ಸ್ಥಿರಮನಸ್ಕರಾಗಿರುವು-ದೆಂದರೆ) ಅವನ (ಕೇವಲ ಬೌದ್ಧಿಕ) ಜ್ಞಾನವು ಎಂದು ಯಾರಾದರೂ ಅರ್ಥ ಮಾಡಿದರೆ ಅದು ಹಾಗಲ್ಲ. ಯಾಕಂದರೆ ದ್ವೇಷಿಗೆ ಕೂಡ ಭಗವಂತನ ಬೌದ್ಧಿಕ ಜ್ಞಾನವಾಗಬಲ್ಲದು. ಆದರೆ ಆ ಜ್ಞಾನವು ಸ್ಥಿರಮನಸ್ಕತೆ (ಭಕ್ತಿ) ಎನಿಸಲಾರದು (೧. ೧. ೪) ೪

**ತಯೋಽಪಕ್ಷಯಾಚ್ಚ ॥ ೧. ೧. ೫ ॥**

ಇದಲ್ಲದೆ ಜ್ಞಾನವು ಭಕ್ತಿಯಿಂದ ಹಿಂದೆ ಹಾಕಲ್ಪಡುವದು. (ಭಕ್ತಿಯು ಜ್ಞಾನಕ್ಕಿಂತ ಬಹಳ ಹೆಚ್ಚಿನದು) (೧. ೧. ೫) ೫

## ಭಕ್ತಿಯು ಒಂದು ಭಾವವು

**ದ್ವೇಷಪ್ರತಿಪಕ್ಷಭಾವಾದ್ರಸಶಬ್ದಾಚ್ಚ ರಾಗಃ ॥ ೧. ೧. ೬ ॥**

ಭಕ್ತಿಯು ಒಂದು ಭಾವವು (ಅದು ಜ್ಞಾನ ಅಥವಾ ಕ್ರಿಯೆ ಅಲ್ಲ). ಯಾಕಂದರೆ ಅದು ದ್ವೇಷಭಾವಕ್ಕೆ ವಿರೋಧಿಯಾದ ಭಾವವೆನಿಸುವದು ಹಾಗೂ ಭಕ್ತಿಯನ್ನು ಕುರಿತು 'ರಸ' (ರುಚಿ, ಆಸಕ್ತಿ) ಎಂಬ ಶಬ್ದವು ಗ್ರಂಥಗಳಲ್ಲಿ (ಗೀತಾ, ವಿಷ್ಣುಪುರಾಣ, ಭಾಗವತ) ಉಪಯೋಗಿಸಲಾಗಿರುವದು (೧. ೧. ೬) ೬

## ಭಕ್ತಿಯು ಕ್ರಿಯೆಯಲ್ಲ

**ನ ಕ್ರಿಯಾ ಕೃತ್ಯನಪೇಕ್ಷಣಾತ್ ಜ್ಞಾನವತ್ ॥ ೧. ೧. ೭ ॥**

ಭಕ್ತಿಯು ಕ್ರಿಯೆಯಲ್ಲ. ಯಾಕಂದರೆ ಅದು ಒಂದು ಕೃತಿಯ (ಕಾರ್ಯ ನಿಶ್ಚಯದ) ಪರಿಣಾಮವಲ್ಲ. ಅದು ಜ್ಞಾನದಂತೆಯೇ (ಕಾರ್ಯ ನಿಶ್ಚಯದ ಪರಿಣಾಮವಲ್ಲ) (೧. ೧. ೭) ೭

## ಭಕ್ತಿಯ ಫಲವು ಅನಂತವು

**ಅತ ಏವ ಫಲಾನಂತ್ಯಮ್ ॥ ೧. ೧. ೮ ॥**

ಆದುದರಿಂದಲೇ (ಇದು ಕ್ರಿಯೆಯಲ್ಲದ್ದರಿಂದ) ಇದರ ಫಲವು ಅನಂತವಿರುವದು. (ಕ್ರಿಯೆಯ ಫಲವು ಆಯಾ ಕ್ರಿಯೆ ಗನುಸರಿಸಿ ಇರುವದು. ಇದು ಕ್ರಿಯೆಯಲ್ಲದ್ದರಿಂದ ಇದರ ಫಲವು ಅನಂತವು) (೧. ೧. ೮) ೮

## ಭಕ್ತಿಯೆಂದರೆ ಜ್ಞಾನವಲ್ಲ

**ತದ್ವತಃ ಪ್ರಪತ್ತಿಶಬ್ದಾಚ್ಚ ನ ಜ್ಞಾನಮಿತರಪ್ರಪತ್ತಿವತ್ ॥ ೧. ೧. ೯ ॥**

ಜ್ಞಾನವಿದ್ದವನು ಕೂಡ ಭಕ್ತಿಯನ್ನು ಮಾಡುವನು ಎಂದು (ಗೀತಾ ೧೫. ೧೯ ಮತ್ತು ೭.೧೯) ಹೇಳಿರುವುದರಿಂದ ಇದು (ಭಕ್ತಿಯು) ಜ್ಞಾನವಲ್ಲ. (ಜ್ಞಾನೋತ್ತರವಲ್ಲದ ಭಕ್ತಿಯ ವಿಷಯಕ್ಕೆ ಬರೆಯುವಾಗ (ಗೀತಾ ೭.೨೦) ಜ್ಞಾನದ ಸಂದರ್ಭವೇ ಇಲ್ಲ. (ಆದುದರಿಂದ ಭಕ್ತಿಯು ಜ್ಞಾನವಲ್ಲ) (೧. ೧. ೯) ೯

## ಪ್ರಕರಣ ೧. ಭಾಗ ೨.

## ಭಕ್ತಿಯೇ ಮುಖ್ಯ ಮಾರ್ಗ

**ಸಾ ಮುಖ್ಯೇತರಾಪೇಕ್ಷಿತತ್ವಾತ್ ॥ ೧. ೨. ೧ ॥**

ಭಕ್ತಿಯು ಮುಖ್ಯವು. ಯಾಕಂದರೆ ಇತರ ಮಾರ್ಗಗಳು (ಯೋಗ ಜ್ಞಾನಾದಿ) ಅದಕ್ಕೆ ಸಹಾಯಕವಾದವುಗಳು. (ಅವು ಅಪೇಕ್ಷಿತವಾದವುಗಳು ಅಂದರೆ ಭಕ್ತಿಗೆ ಪೋಷಕವೆಂದು ಎಣಿಸಲ್ಪಟ್ಟವುಗಳು) (೧. ೨. ೧) ೧೦

ಪ್ರಕರಣಾಚ್ಚ ॥ ೧. ೨. ೨ ॥

(ಗ್ರಂಥಗಳಲ್ಲಿ) ಈ ಚರ್ಚೆಯ ಸಂದರ್ಭದಿಂದಲೂ ಅದೇ ಮಾತು ಸಿದ್ಧನಾಗುವದು (೧. ೨. ೨) ೧೧

ದರ್ಶನಫಲಮಿತಿ ಚೇನ್ನ ತೇನ ವ್ಯವಧಾನಾತ್ ॥ ೧. ೨. ೩ ॥

ಅದು (ಮುಕ್ತಿಯು ಕೇವಲ ದರ್ಶನದ ಫಲವು ಎಂದರೆ ಅದು ಹಾಗಲ್ಲ ಯಾಕಂದರೆ ಅಲ್ಲಿ (ಆ ಸಂದರ್ಭಗಳಲ್ಲಿ) ಅವನು ಅಥವಾ ನೋಡುವವನು, ಆತ್ಮದರ್ಶನವನ್ನು ಪಡೆಯುವವನು ಮುಕ್ತನಾಗುವನು ಇತ್ಯಾದಿ (ಛಾಂದೋಗ್ಯ ೭.೨೪) ಶ್ರುತಿ ವಾಕ್ಯಗಳಲ್ಲಿ) 'ಅವನು' ಅಂದರೆ ಭಕ್ತನು ಎಂಬುದು ಮಧ್ಯೇ ಇರುವದು. (೧. ೨. ೩) ೧೨

ದೃಷ್ಟತ್ವಾಚ್ಚ ॥ ೧. ೨. ೪ ॥

ನಮಗೆ ವ್ಯವಹಾರದಲ್ಲಿ ಹೀಗೆಯೆ (ಮೊದಲು ವಸ್ತು-ಜ್ಞಾನ ಆ ಬಳಿಕ ಅದರ ಭಕ್ತಿ. ಜ್ಞಾನವು ಭಕ್ತಿಯ ಸಾಧನ ಹೊರತು ಭಕ್ತಿಯು ಜ್ಞಾನಸಾಧನವಲ್ಲ) ಕಂಡುಬರುವುದರಿಂದ (ಭಕ್ತಿಯೆ ಮುಖ್ಯವು) (೧. ೨. ೪) ೧೩

ಅತ ಏವ ತದಭಾವಾದ್ವಲ್ಲವೀನಾಮ್ ॥ ೧. ೨. ೫ ॥

ಆದುದರಿಂದಲೆ (ಜ್ಞಾನವು ಕೇವಲ ಗೌಣವಿರುವದರಿಂದ) ಗೋಪಿಕೆಯರಿಗೆ ಅದು (ಜ್ಞಾನ) ಇಲ್ಲದೆ ಮುಕ್ತಿ ದೊರಕಿತು (ಕೇವಲ ಭಕ್ತಿಯಿಂದ) (೧. ೨. ೫) ೧೪

**ಭಕ್ತ್ಯಾ ಜಾನಾತೀತಿ ಚೇನ್ನಾಭಿಜ್ಞಪ್ತ್ಯಾ ಸಾಹಾಯ್ಯಾತ್ ॥ ೧. ೨. ೬ ॥**

ಭಕ್ತಿಯಿಂದ (ಭಕ್ತನು ಭಗವಂತನನ್ನು) ಅರಿತು ಕೊಳ್ಳುವನು ಎಂದು ಹೇಳಿದರೆ ಅದು ಹಾಗಲ್ಲ. ಯಾಕಂದರೆ ಅಲ್ಲಿ ಅಭಿಜಾನಾತಿ (ಗೀತಾ ೧೮. ೫೫ ಮೊದಲು ಅರಿತುದನ್ನೆ ಪುನಃ ಅರಿಯುವನು) ಎಂಬ ಶಬ್ದಪ್ರಯೋಗದ ಸಹಾಯವು (ಉತ್ತರ ಪಕ್ಷಕ್ಕೆ) ಇದೆ (೧. ೨. ೬) ೧೫

**ಪ್ರಾಗುಕ್ತಂಚ ॥ ೧. ೨. ೭ ॥**

ಮೇಲಾಗಿ ಇದು (ಭಕ್ತನಿಗೆ ಜ್ಞಾನವಾಗುವದು– ಗೀತಾ ೧೮. ೫೩) ಮೊದಲೇ ಹೇಳಲಾಗಿದೆ (೧. ೨. ೮) ೧೬

**ಏತೇನ ವಿಕಲ್ಪೋಽಪಿ ಪ್ರತ್ಯುಕ್ತಃ ॥ ೧. ೨. ೮ ॥**

ಇದರಿಂದ (ಮೇಲಿನ ತರ್ಕಕೋಟಿಯಿಂದ) ಭಕ್ತಿ ಜ್ಞಾನಗಳು ವೈಕಲ್ಪಿಕವಾದವುಗಳು (ಎರಡೂ ಸಮಶಕ್ತಿ ಯುಳ್ಳವುಗಳು ಹಾಗೂ ಸಮಫಲ ಕೊಡುವಂತಹವುಗಳು) ಎಂಬ ಮಾತಿಗೂ ಉತ್ತರ ಕೊಡಲಾಗಿದೆ (೧. ೨. ೮) ೧೭

**ದೇವಭಕ್ತಿರಿತರಸ್ಮಿನ್ ಸಾಹಚರ್ಯಾತ್ ॥ ೧. ೨. ೯ ॥**

(ಬೇರೆ ಎಷ್ಟೋ ಕಡೆಗೆ) ದೇವಭಕ್ತಿ ಎಂಬ ಶಬ್ದ ಪ್ರಯೋಗವು ಅನ್ಯ ದೇವತೆಗಳನ್ನು ಕುರಿತು ಇರುವದು (ಭಗ ವಂತನನ್ನು ಕುರಿತು ಅಲ್ಲ). ಯಾಕಂದರೆ ಅಲ್ಲಿ (ಶ್ವೇತಾಶ್ವ ತರ ೬. ೨೩. ಗುರು ಮುಂತಾದ ಬೇರೆ ಶಬ್ದಗಳ) ಸಾಹಚರ್ಯ ಇದೆ. (ಭಗವಂತನನ್ನೇ ಕುರಿತು ಆ ಶಬ್ದಪ್ರಯೋಗವಿದ್ದು ನಾದರೆ ಆ ಸಾಹಚರ್ಯವಿರುತಿರಲಿಲ್ಲ) (೧. ೨. ೯) ೧೮

**ಯೋಗಸ್ತೂಭಯಾರ್ಥಮಪೇಕ್ಷಣಾತ್ ಪ್ರಯಾಜವತ್ ॥ ೧. ೨. ೧೦ ॥**

ಯೋಗವು (ಚಿತ್ತವೃತ್ತಿ ನಿರೋಧ) ಉಭಯ ಮಾರ್ಗಗಳಿಗಾಗಿಯೂ (ಭಕ್ತಿ, ಜ್ಞಾನ) ಇರುವದು. ಯಾಕಂದರೆ ಎರಡೂ ಮಾರ್ಗಗಳು ಅದನ್ನು ಸ್ವಸಿದ್ಧಿಗಾಗಿ ಅಪೇಕ್ಷಿಸುವವು. ಪ್ರಯಾಜ ಎಂಬ ಯಜ್ಞದಂತೆ (ಯೋಗವು) ಇರುವದು. ಪ್ರಯಾಜ ಯಜ್ಞವು ವಾಜಪೇಯ ಹಾಗೂ ದೀಕ್ಷಣೀಯ ಎಂಬ ಎರಡು ಯಜ್ಞಗಳಿಗೆ ಸಹಾಯಕವು. (ಇದೊಂದು ಉದಾಹರಣೆ ಕೊಡಲಾಗಿದೆ) (೧. ೨. ೧೦) ೧೯ (ಆದರೆ ಪಾತಂಜಲ ಯೋಗಸೂತ್ರದಲ್ಲಿ (೧. ೨೩) ಈಶ್ವರಧ್ಯಾನದಿಂದ ಸಮಾಧಿಯು ಪ್ರಾಪ್ತವಾಗುವದು ಎಂದು ಹೇಳಲಾಗಿದೆ. ಅಂದಬಳಿಕ ಭಕ್ತಿಯೇ ಮುಖ್ಯ ಸಾಧನ ಎಂಬುದು ಹೇಗೆ, ಎಂಬ ಪ್ರಶ್ನೆ ಉದ್ಭವಿಸುವದು ಅದಕ್ಕೆ ಸಮಾಧಾನ).

**ಗೌಣ್ಯಾ ತು ಸಮಾಧಿಸಿದ್ಧಿಃ ॥೧. ೨. ೧೧॥**

ಗೌಣೀ ಭಕ್ತಿಯಿಂದ ಸಮಾಧಿಯು (ಚಿತ್ತಲಯ) ಸಾಧಿಸುವದು (ಮುಖ್ಯಾಭಕ್ತಿಯಿಂದ ಇದಕ್ಕೂ ಹೆಚ್ಚಿನ ಫಲವು ದೊರೆಯುವುದರಿಂದ ಅದೇ ಎಲ್ಲಕ್ಕೂ ಶ್ರೇಷ್ಠ ಎಂಬರ್ಥ) (೧. ೨. ೧೧) ೨೦

(ಇನ್ನು ಭಕ್ತಿ ಎಂಬುದೊಂದು ಭಾವವು, 'ರಾಗ' ವು ರಾಗದ್ವೇಷಗಳು ತ್ಯಾಜ್ಯವಾದುದರಿಂದ ಅದೂ ತ್ಯಾಜ್ಯವು ಅಂದರೆ ಅದಕ್ಕೆ ಸಮಾಧಾನ-)

**ಹೇಯಾ ರಾಗತ್ವಾದಿತಿ ಚೇನ್ನೋತ್ತಮಾಸ್ಪದತ್ವಾತ್ ಸಂಗವತ್ ॥೧. ೨. ೧೨॥**

ಅದು 'ರಾಗ' ವಿದ್ದುದರಿಂದ (ರುಚಿ, ಆಸಕ್ತಿ) ತ್ಯಾಜ್ಯವು ಎಂದರೆ ಹಾಗಲ್ಲ. ಯಾಕಂದರೆ ಅದರ ಧ್ಯೇಯವು ಉತ್ತಮ

ವಿರುವದು ( ಭಗವಂತನೇ ಧ್ಯೇಯ ). ಸಂಗದಂತೆಯೆ ರಾಗವ್ವ ( ದುಃಸಂಗವು ತ್ಯಾಜ್ಯವು ಹೊರತು ಸತ್ಸಂಗವು ತ್ಯಾಜ್ಯ ವಲ್ಲ ) ( ೧. ೨. ೧೨ ) ೨೧

## ಭಕ್ತಿಯೇ ಎಲ್ಲಕ್ಕೂ ಶ್ರೇಷ್ಠ

**ತದೇವ ಕರ್ಮಿಜ್ಞಾನಿಯೋಗಿಭ್ಯ ಅಧಿಕ್ಯ ಶಬ್ದಾತ್ ॥ ೧. ೨. ೧೩ ॥**

ಕರ್ಮಿ, ಜ್ಞಾನಿ ಮತ್ತು ಯೋಗಿಗಳಿಗಿಂತ ಭಕ್ತನೆ ಶ್ರೇಷ್ಠನು ಎಂಬ ಶಬ್ದಯೋಜನೆ ಮಾಡಲಾಗಿದೆ ( ಗೀತಾ ೬. ೪೭ ) ( ೧. ೨. ೧೩ ) ೨೨

( ಇದು ಕೇವಲ ಔಪಚಾರಿಕ ಅರ್ಥವಾದವಲ್ಲ. ಈ ಸಂಗ ತಿಯು ಪ್ರಶ್ನೋತ್ತರರೂಪ ಸಂವಾದದಿಂದ ಗೀತೆಯಲ್ಲಿ ಸಿದ್ಧ ಮಾಡಲಾಗಿದೆ. )

**ಪ್ರಶ್ನನಿರೂಪಣಾಭ್ಯಾಮಾಧಿಕ್ಯಸಿದ್ಧೇಃ ॥ ೧. ೨. ೧೪ ॥**

ಪ್ರಶ್ನೋತ್ತರಗಳಿಂದ ಇದು ಸಿದ್ಧ ಮಾಡಲಾಗಿದೆ ( ೧. ೨. ೧೪ ) ೨೩. ( ಉದಾಹರಣಾರ್ಥವಾಗಿ ಗೀತೆಯಲ್ಲಿ ೭ ನೇ ಅಧ್ಯಾಯದ ಪ್ರಾರಂಭದಲ್ಲಿ ಮತ್ತು ೧೨ ನೇ ಅಧ್ಯಾಯ ದಲ್ಲಿ ಶ್ರೀಕೃಷ್ಣನ ಉಕ್ತಿಗಳಿವೆ. )

## ಭಕ್ತಿ ಶ್ರದ್ಧೆಯಲ್ಲ

**ನೈವ ಶ್ರದ್ಧಾ ತು ಸಾಧಾರಣ್ಯಾತ್ ॥ ೧. ೨. ೧೫ ॥**

ಭಕ್ತಿಯು ಶ್ರದ್ಧೆಯಲ್ಲ. ಯಾಕಂದರೆ ಶ್ರದ್ಧೆಯು ಇತರ ವಿಷಯಗಳಲ್ಲಿಯೂ ಸಾಮಾನ್ಯವಾಗಿರುವದು. ( ಭಕ್ತಿ ಎಂಬುದು ಭಗವಂತನನ್ನು ಕುರಿತು ಮಾತ್ರ ಇರುವದು.

ಶ್ರದ್ಧೆಯು ಕರ್ಮಾದಿ ಅನೇಕ ವಿಷಯಗಳಲ್ಲಿ ಇರಬಲ್ಲದು
(೧. ೨. ೧೫) ೨೪

(ಭಕ್ತಿಯು ಶ್ರದ್ಧೆಯಲ್ಲ ಎಂಬುದಕ್ಕೆ ಮತ್ತೆ ಕಾರಣ-)

**ತಸ್ಯಾಂ ತತ್ವೇ ಚಾನವಸ್ಥಾನಾತ್ ॥ ೧. ೨. ೧೬ ॥**

ಹಾಗೆ ಆದರೆ (ಭಕ್ತಿಯು ಶ್ರದ್ಧೆ ಎನಿಸಿದರೆ) ಶ್ರದ್ಧಾ ರೂಪ ಭಕ್ತಿಯು ಭಕ್ತಿಯ ಸಹಾಯಕ (ಗೀತಾ ೬. ೪೭ ಶ್ರದ್ಧಾವಾನ್ ಭಜತೇ) ಎಂದು ಹೇಳಬೇಕಾಗುವದು (ಅಂದರೆ ಶ್ರದ್ಧೆಯೇ ಶ್ರದ್ಧೆಯ ಸಹಾಯಕ ಎಂದು ಅರ್ಥವಿಹೀನವಾದ ರೀತಿಯಿಂದ ಹೇಳಬೇಕಾಗುವದು). ಮೇಲಾಗಿ ಇದರಿಂದ ಅನವಸ್ಥಾ ದೋಷವು (ಮುಗಿಯದಂಥ ತರ್ಕಪರಂಪರೆ. ಉದಾ: ಬೀಜ ಮೊದಲೋ ವೃಕ್ಷ ಮೊದಲೋ? ಇದಕ್ಕೆ ಯಾವ ಉತ್ತರ ಕೊಟ್ಟರೂ ಅನವಸ್ಥೆಯಾಗುವದು) ಉಂಟಾಗುವದು. (೧. ೨. ೧೬) ೨೫.

## ಬ್ರಹ್ಮಕಾಂಡದಲ್ಲಿ ಭಕ್ತಿ ಮುಖ್ಯ

**ಬ್ರಹ್ಮಕಾಂಡಂ ತು ಭಕ್ತೌ ತಸ್ಯಾನುಜ್ಞಾನಾಯ ಸಾಮಾನ್ಯಾತ್ ॥ ೧. ೨. ೧೭ ॥**

ಬ್ರಹ್ಮಕಾಂಡದಲ್ಲಿ (ಬ್ರಹ್ಮಜ್ಞಾನವು ಹೇಳಲ್ಪಟ್ಟ ವೇದ ಭಾಗದಲ್ಲಿ) ಭಕ್ತಿ ಎಂಬ ವಿಷಯವೆ ಧ್ಯೇಯವಾಗಿದೆ (ಕೇವಲ ಜ್ಞಾನವು ಅದರ ವಿಷಯವಲ್ಲ). ಯಾಕಂದರೆ (ಅದು ಜ್ಞಾನ ಕಾಂಡವಿರುವದು ಎಂದು ಪೂರ್ವ ಪಕ್ಷವಿದ್ದರೆ) ಜ್ಞಾನವಿಷಯವು ವೇದದ ಎರಡೂ ಭಾಗಗಳಿಗೂ (ಪೂರ್ವ ಮೀಮಾಂಸಾ ಉತ್ತರ ಮೀಮಾಂಸಾ) ಸಾಮಾನ್ಯವಿರುವದು (ಆದುದರಿಂದ ಉತ್ತರ ಕಾಂಡದಲ್ಲಿ ಭಕ್ತಿಯೇ ವಿಶಿಷ್ಟ ವಿಷಯವು) (೧. ೨. ೧೭) ೨೬.

## ಪ್ರಕರಣ ೨. ಭಾಗ ೧.

### ಸಾಧನ–ಜ್ಞಾನ

(ಇನ್ನು ಭಕ್ತಿಯ ಸಾಧನಗಳ ಉಲ್ಲೇಖವು ಮಾಡಲಾಗಿದೆ.— )

**ಬುದ್ಧಿಹೇತುಪ್ರವೃತ್ತಿರಾವಿಶುದ್ಧೇರವಘಾತವತ್ ॥೨. ೧. ೧॥**

ಎಲ್ಲ ತವುಡು ಹೋಗಿ ಶುದ್ಧ ಅಕ್ಕಿಯು ಕಾಳು ಕೈ ಸೇರುವ ವರೆಗೆ ಭತ್ತವನ್ನು ಕುಟ್ಟುವಂತೆ ಮನುಷ್ಯನು ತನ್ನ ಚಿತ್ತ ಶುದ್ಧಿಯು ಪೂರ್ಣ ಆಗುವ ವರೆಗೆ ಬುದ್ಧಿಯಿಂದ ಭಗವಂತನ ಜ್ಞಾನವನ್ನು ಪಡೆಯಲು ಯತ್ನಿಸುತ್ತಿರಬೇಕು. (೨. ೧. ೧) ೨೭.

**ತದಂಗಾನಾಂ ಚ ॥ ೨. ೧. ೨ ॥**

(ಮುಖ್ಯ ಸಾಧನವಲ್ಲದೆ) ಸಾಧನದ ಅಂಗಗಳನ್ನು ಸಹ (ಸತ್ಯ, ಶೌಚಾದಿ ನಿಯಮಗಳನ್ನು) ಆಚರಿಸುತ್ತಿರಬೇಕು (೨. ೧. ೨) ೨೮.

### ಜ್ಞಾನವಿಷಯ

(ಈ ಬಗ್ಗೆ ಇದ್ದ ಮತಭೇದಗಳು ಹಾಗೂ ಶಾಂಡಿಲ್ಯನ ಸಿದ್ಧಾಂತ— )

**ತಾಮೈಶ್ವರ್ಯಪರಾಂ ಕಾಶ್ಯಪಃ ಪರತ್ವಾತ್ ॥ ೨. ೧. ೩ ॥**

ಭಗವಂತನ ಐಶ್ವರ್ಯವೆ ನಮ್ಮ ಜ್ಞಾನವಿಷಯವಿರಬೇಕು. ಯಾಕಂದರೆ ಭಗವಂತನು ಎಲ್ಲಕ್ಕೂ ಶ್ರೇಷ್ಠನು, ಎಂದು ಕಾಶ್ಯಪನ ಮತವು (೨. ೧. ೩) ೨೯

**ಆತ್ಮೈಕಪರಾಂ ಬಾದರಾಯಣಃ ॥ ೨. ೧. ೪ ॥**

ಆತ್ಮನೆ ನಮ್ಮ ಜ್ಞಾನವಿಷಯವಿರಬೇಕು ಎಂದು ಬಾದರಾಯಣನ ಮತವು ( ೨. ೧. ೪ ) ೩೦

ಉಭಯಪರಾಂ ಶಾಂಡಿಲ್ಯಃ ಶಬ್ದೋಪಪತ್ತಿಭ್ಯಾಮ್ ||೨. ೧. ೫||

ಭಗವಂತನ ಐಶ್ವರ್ಯ ಹಾಗೂ ಆತ್ಮ ಇವೆರಡೂ (ಜೀವಾತ್ಮ ಪರಮಾತ್ಮ ಇವೆರಡೂ) ಜ್ಞಾನವಿಷಯಗಳಿರಬೇಕು ಎಂದು ಶಾಂಡಿಲ್ಯನ ಮತವು. ಯಾಕಂದರೆ ಇದಕ್ಕೆ ಶಬ್ದ ( ವೇದಾದಿಗಳು ) ಮತ್ತು ಬುದ್ಧಿವಾದ ( ತರ್ಕ ) ಇವುಗಳ ಪ್ರಮಾಣವಿದೆ (೨. ೧. ೫ ) ೩೧

## ಜೀವಾತ್ಮ ಪರಮಾತ್ಮ

( ಜೀವಾತ್ಮ ಪರಮಾತ್ಮ ಇವು ಬೇರೆ ಬೇರೆ ವಸ್ತುಗಳು. ಅಂದ ಬಳಿಕ ಇವೆರಡರ ಜ್ಞಾನವೂ ಫಲಕಾರಿ ಎಂದು ಹೇಳುವದು ಅನುಚಿತ ಎಂಬುದು ಪೂರ್ವಪಕ್ಷ. ಅದಕ್ಕೆ ಸಮಾಧಾನ-)

ವೈಷಮ್ಯಾದಸಿದ್ಧಮಿತಿ ಚೇನ್ನಾಭಿಜ್ಞಾನವದವೈಶಿಷ್ಟ್ಯಾತ್ ||೨. ೧. ೬ ||

ಜೀವಾತ್ಮ ಪರಮಾತ್ಮ ಈ ಎರಡು ವಸ್ತುಗಳಲ್ಲಿ ಅಸಮಾನತೆ ಇರುವುದರಿಂದ ಮೇಲೆ ಹೇಳಿದುದು ಸಿದ್ಧವಾಗದು ಎಂದುಅಂದರೆ ಅದು ಹಾಗಲ್ಲ. ವಿಶಿಷ್ಟ ಭೇದಗಳು ತೋರದೆ ಇರುವಾಗ ಸಾಧಾರಣ ಸಮವಸ್ತುಗಳ ಜ್ಞಾನವು ನಮಗೆ ಆಗಬಲ್ಲದು. ಅದರಂತೆ ಈ ಜೀವಾತ್ಮ ಪರಮಾತ್ಮ ವಸ್ತುಗಳ ಜ್ಞಾನದ ವಿಷಯವು ( ೨. ೧. ೬ ) ೩೨

( ಹಾಗಾದರೆ ಜೀವಾತ್ಮನಿಗೆ ಆಗುವ ದುಖಃವು ಪರಮಾತ್ಮನಿಗೆ ಆಗಬಲ್ಲದು ಎಂಬ ಆಕ್ಷೇಪಕ್ಕೆ— )

ನ ಚ ಕ್ಲಿಷ್ಟಃ ಪರಃ ಸ್ಯಾದನಂತರಮ್ ವಿಶೇಷಾತ್ ||೨. ೧. ೭|

ಪರಮಾತ್ಮನಿಗೆ ಕ್ಲೇಶವಾಗದು (ಜೀವಾತ್ಮನಿಗೆ ಆಗು ವಂತೆ) ಯಾಕಂದರೆ ಕೂಡಲೆ ಅವರ ನಡುವಿನ ಅಂತರವು (ಪರಮಾತ್ಮನು ಕೇವಲ ಆನಂದ ಸ್ವರೂಪನು-ರಸೋ ವೈ ಸಃ ಇತ್ಯಾದಿ ಎಂದು) ಹೇಳಲಾಗಿದೆ (೨. ೧. ೭) ೩೩

ಐಶ್ವರ್ಯಂ ತಥೇತಿ ಚೇನ್ನ ಸ್ವಾಭಾವ್ಯಾತ್ ॥ ೨. ೧. ೮ ॥

ಪರಮಾತ್ಮನ ಐಶ್ವರ್ಯದ ಗತಿಯಾದರೂ ಅದೇ (ಅದೂ ಜೀವಾತ್ಮನ ಐಶ್ವರ್ಯದಂತೆ ನಷ್ಟವಾಗುವದು) ಎಂದು ಅಂದರೆ ಹಾಗಲ್ಲ. ಯಾಕಂದರೆ ಅವನ ಐಶ್ವರ್ಯವು ಸ್ವಭಾವ ಸಿದ್ಧವಿದೆ (೨. ೧. ೮) ೩೪

(ಜೀವಾತ್ಮನ ಕ್ಲೇಶವು ಸಹ ಸ್ವಾಭಾವಿಕವಲ್ಲ, ಅದು ಉಪಾಧಿಮೂಲಕ ಎಂದು ಸೂಚಿಸಲಾಗಿದೆ.)

ಅಪ್ರತಿಷಿದ್ಧಂ ಪರೈಶ್ವರ್ಯಂ ತದ್ಭಾವಾಚ್ಚ ನೈವಮಿತರೇಷಾಂ ॥ ೨. ೧. ೯ ॥

ಭಗವಂತನ ಐಶ್ವರ್ಯವು ನಿರಂತರವಿರುವದು (ಅಪ್ರತಿ ಷಿದ್ಧ) ಜೀವಾತ್ಮರು ಅವನ ಅಂಶಗಳಿರುವುದರಿಂದ ಕ್ಲೇಶಾದಿ ಗಳು ಅವುಗಳ ಮೂಲ ಸ್ವಭಾವವಲ್ಲ (ಕ್ಲೇಶಾದಿಗಳು ಉಪಾಧಿಮೂಲಕ ಬಂದವುಗಳು) (೨. ೧. ೯) ೩೫

ಸರ್ವನಾಶವು ಒದಗಿದಾಗ ಭಗವಂತನ ಐಶ್ವರ್ಯಕ್ಕೆ ಎಡೆ ಎಲ್ಲಿ ಎಂಬ ಪ್ರಶ್ನೆಗೆ—

ಸರ್ವಾನೃತೇ ಕಿಮಿತಿ ಚೇನ್ನೈವಂ ಬುದ್ಧ್ಯಾನಂತ್ಯಾತ್ ॥ ೨. ೧. ೧೦ ॥

ಸರ್ವ ಉಪಾಧಿಗಳ ನಾಶವಾದರೆ ಆಗ ಏನು ಸ್ಥಿತಿಯಾಗು ವದು ಎಂದು ಕೇಳಿದರೆ ಹಾಗೆ ಆಗುವದೇ ಇಲ್ಲ (ಎಂದು ಉತ್ತರ). ಯಾಕಂದರೆ ಬುದ್ಧಿ ಎಂಬ ಉಪಾಧಿಯು ಅನಂತ

ವಿರುವದು. (ಆದುದರಿಂದ ಭಗವಂತನ ಐಶ್ವರ್ಯವು ಅಖಂಡ ವಿರುವದು. ಅನಂತ ಜೀವಗಳಿರುವುದರಿಂದ ಎಷ್ಟು ಜೀವಗಳು ಮುಕ್ತವಾದರೂ ಮತ್ತೆ ಉಪಾಧಿಯುಕ್ತ ಜೀವಗಳಿದ್ದೇ ಇರು ವವು. ಅಂಥ ಉಪಾಧಿಯುಕ್ತ ಜೀವಗಳಿರುವ ವರೆಗೆ ಅವರನ್ನು ಆಳುವ ಭಗವಂತನ ಐಶ್ವರ್ಯಗುಣವು ಇದ್ದೇ ಇರುವದು) (೨. ೧ ೧೦) ೩೬

## ಪರಮಾತ್ಮನು ಅವಿಕೃತನು

ಭಗವಂತನು 'ಕಾರ್ಯ' ಮಾಡುವುದರಿಂದ ಅವನಲ್ಲಿ ಹೆಚ್ಚು ಕಡಿಮೆಯಾಗುವದೋ ಎಂಬ ಪ್ರಶ್ನೆಗೆ—

**ಪ್ರಕೃತ್ಯಂತರಾಲಾದವೈಕಾರ್ಯಂ ಚಿತ್ಸತ್ತ್ವೇನಾನುವರ್ತ ಮಾನಾತ್ ॥ ೨. ೧. ೧೧ ॥**

ಭಗವಂತನು ಪ್ರಕೃತಿ ಮೂಲಕ ವರ್ತಿಸುವವನಾದ್ದರಿಂದ ಅವನಲ್ಲಿ ವಿಕಾರವಾಗದು. ಚಿದ್ರೂಪದಿಂದ ಪ್ರಕೃತಿಯಲ್ಲಿ ಪ್ರವೇಶಿಸಿ ಅವನು ವರ್ತಿಸುವನು (ಆದುದರಿಂದ ಸ್ವತಃ ಅವ ನಿಗೆ ವಿಕಾರವಿಲ್ಲ) (೨. ೧. ೧೧) ೩೭

**ತತ್ಪ್ರತಿಷ್ಠಾ ಗೃಹಪೀಠವತ್ ॥ ೨. ೧. ೧೨ ॥**

ಮನೆಯ ತಳಹದಿಯಂತೆ ಅವನು ವಿಶ್ವಾಧಾರನು (ಅವನು ವಿಶ್ವಾಧಾರನಿದ್ದರೂ ಅವನಲ್ಲಿ ವಿಕೃತಿ ಇಲ್ಲ) (೨. ೧. ೧೨) ೩೮

## ಪುರುಷ-ಪ್ರಕೃತಿ

(ಎರಡೂ ವಿಶ್ವಕಾರಣಗಳು ಎಂಬುದಕ್ಕೆ-)

**ಮಿಥೋಽಪೇಕ್ಷಣಾದುಭಯಮ್ ॥ ೨. ೧. ೧೩ ॥**

( ಯಾವದೇ ಕಾರ್ಯಕ್ಕೆ ) ಪರಸ್ಪರರ ಅಪೇಕ್ಷೆ (ಸಹಾಯ ಸಹಕಾರಗಳು) ಇರುವುದರಿಂದ ಎರಡೂ ವಿಶ್ವಕಾರಣಗಳು ( ೨. ೧. ೧೩ ) ೩೯

**ಚೇತ್ಯಾಚಿತೋರ್ನತೃತೀಯಮ್ ॥ ೨. ೧. ೧೪ ॥**

ಜ್ಞಾತಾ ಮತ್ತು ಜ್ಞೇಯ ( ಚಿತ್ ಅಚಿತ್ ) ಇವೆರಡನ್ನು ಳಿದು ವಿಶ್ವದಲ್ಲಿ ಮೂರನೆಯದೆಂಬುದು ಇಲ್ಲೇ ಇಲ್ಲ ( ಪ್ರತಿಯೊಂದು ವಸ್ತುವು ಈ ಎರಡರಲ್ಲಿ ಒಂದು ಇರುವದು. ಜ್ಞಾನ ಎಂಬ ತೃತೀಯ ವಸ್ತು ಇಲ್ಲ. ( ೨. ೧. ೧೪ ) ೪೦

**ಯುಕ್ತೌ ಚ ಸಂಪರಾಯಾತ್ ॥ ೨. ೧. ೧೫ ॥**

ಇವೆರಡೂ ಅನಾದಿ ಇರುವುದರಿಂದ ಪರಸ್ಪರ ಸಂಯುಕ್ತ ವಿರುವವು ( ೨. ೧. ೧೫ ) ೪೧

( ಪ್ರಕೃತಿಯು ಮಾಯಾರೂಪವಿರುವುದರಿಂದ ಮಿಥ್ಯೆ ಎಂದು ಯಾರಾದರೂ ಅಂದರೆ ಅದಕ್ಕೆ— )

**ಶಕ್ತಿತ್ವಾನ್ನಾನೃತಂ ವೇದ್ಯಮ್ ॥ ೨. ೧. ೧೬ ॥**

ಜ್ಞೇಯುವೆಂಬುದು ( ಪ್ರಕೃತಿ ) ಮಿಥ್ಯೆಯಲ್ಲ ಯಾಕಂದರೆ ಅದು ಶಕ್ತಿ ಇದೆ ( ೨. ೧. ೧೬ ) ೪೨

## ಶುದ್ಧ ಚಿತ್ತದ ಲಕ್ಷಣ

( ಪುನಃ ಚಿತ್ತಶುದ್ಧಿ ವಿಷಯದತ್ತ— )

**ತತ್ಪರಿಶುದ್ಧಿಶ್ಚ ಗಮ್ಯಾ ಲೋಕವಲ್ಲಿಂಗೇಭ್ಯಃ ॥ ೨. ೧. ೧೭ ॥**

ಲೋಕದಲ್ಲಿ ಆಯಾ ಲಕ್ಷಣಗಳಿಂದ ವಸ್ತುಗಳ ಜ್ಞಾನ ವಾಗುವಂತೆ ವಿಶಿಷ್ಟ ಲಕ್ಷಣಗಳಿಂದ ಚಿತ್ತಶುದ್ಧಿಯ ಜ್ಞಾನ ವಾಗುವದು ( ೨. ೧. ೧೭ ) ೪೩

( ಇದಲ್ಲದೆ ಭಕ್ತನಲ್ಲಿ ಭಗವಂತನನ್ನು ಕುರಿತು ಉಂಟಾದ ಭಾವವು ಹಲವು ಲಕ್ಷಣಗಳಿಂದ ವ್ಯಕ್ತವಾಗುವದು— )

ಸಮ್ಮಾನ ಬಹುಮಾನ ಪ್ರೀತಿ ವಿರಹೇತರವಿಚಿಕಿತ್ಸಾ ಮಹಿಮ ಖ್ಯಾತಿ ತದರ್ಥಪ್ರಾಣಸ್ಥಾನ ತದೀಯತಾ ಸರ್ವ ತದ್ಭಾವಾಪ್ರಾತಿಕೂಲ್ಯಾದೀನಿ ಚ ಸ್ಮರಣೇಭ್ಯೋ ಬಾಹುಲ್ಯಾತ್ ॥ ೨. ೧. ೧೮ ॥

ಸ್ಮೃತಿಗಳಲ್ಲಿ ( ಮಹಾಭಾರತಾದಿಗಳಲ್ಲಿ ಸಹ ) ಈ ಕೆಳಗಿನ (ಶುದ್ಧ ಭಕ್ತಿಯ ) ಲಕ್ಷಣಗಳು ಹೇರಳವಾಗಿ ದೊರೆಯುವವು- ಭಗವಂತನಿಗೆ ಸಮ್ಮಾನ ಬಹುಮಾನಗಳನ್ನು ಮಾಡುವದು, ಅವನ ಬಗ್ಗೆ ಪ್ರೀತಿ ಹಾಗೂ ವಿರಹ, ಇತರರ ಬಗ್ಗೆ ಸಂಶಯ ಯುಕ್ತ ಚಿಕಿತ್ಸೆ, ಅವನ ಮಹಿಮೆಯ ಪ್ರಶಂಸೆ, ಅವನಿಗಾಗಿ ಜೀವಿಸುವದು, ತಾನು ಅವನವನು ಎಂಬ ಭಾವ, ಎಲ್ಲೆಲ್ಲಿಯೂ ಭಗವಂತನಿರುವನೆಂಬ ಭಾವನೆ, ಭಗವದಿಚ್ಛೆಗೆ ಅವಿರೋಧ ವಾಗಿ ನಡೆಯುವದು ಅಥವಾ ಸರ್ವಾರ್ಪಣ ಬುದ್ಧಿಯಿಂದ ನಡೆಯುವದು ( ೨. ೧. ೧೮ ) ೪೪

ದ್ವೇಷಾದಯಸ್ತು ನೈವಮ್ ॥ ೨. ೧. ೧೯ ॥

ದ್ವೇಷಾದಿ ಭಾವಗಳು ಶುದ್ಧಚಿತ್ತದ ಅಥವಾ ಶುದ್ಧ ಭಕ್ತಿಯ ಲಕ್ಷಣಗಳಲ್ಲ ( ೨. ೧. ೧೯ ) ೪೫

## ಭಗವಂತನ ಅವತಾರಗಳು

( ಭಗವಂತನ ಅವತಾರಗಳನ್ನು ಕುರಿತು ಭಕ್ತಿಭಾವವನ್ನು ತಾಳಬಹುದೋ ಎಂಬ ಬಗ್ಗೆ— )

ತದ್ವಾಕ್ಯಶೇಷಾತ್ ಪ್ರಾದುರ್ಭಾವೇಷ್ವಪಿ ಸಾ ॥ ೨. ೧. ೨೦॥

ಆಯಾ ಸಂದರ್ಭದಲ್ಲಿ ( ಗೀತಾ ೭. ೨೩. ಮದ್ಭಕ್ತಾಃ ಯಾಂತಿ ಮಾಮಪಿ । ಹಾಗೂ ೭. ೨೦. ಯಾಂ ಯಾಂ ತನುಂ ರೂಪಂ ) ಭಕ್ತಃ ಅರ್ಚತಿ। ) ಭಕ್ತಿಯನ್ನು ಹೇಳಿದ ವಾಕ್ಯ ಗಳಲ್ಲಿಯ ಕೊನೆ ಮಾತುಗಳನ್ನು ನೋಡಲಾಗಿ ಭಗವಂತನ

ಅವತಾರಗಳನ್ನು ಕುರಿತು ಭಕ್ತಿಯು ಇರಬಲ್ಲದು ಎಂಬುದು ಸಿದ್ಧವಾಗುವದು ( ೨. ೧. ೨೦ ) ೪೬

**ಜನ್ಮಕರ್ಮವಿದಶ್ಚಾಜನ್ಮಶಬ್ದಾತ್ ॥ ೨. ೧. ೨೧ ॥**

( ಭಗವಂತನ ) ಜನ್ಮ ಕರ್ಮಗಳನ್ನರಿತವನು ಪುನರ್ಜನ್ಮವನ್ನು ಹೊಂದುವುದಿಲ್ಲ ( ಗೀತಾ ೪. ೯. ತ್ಯಕ್ತ್ವಾ ದೇಹಂ ಪುನರ್ಜನ್ಮ ನ ಏತಿ ಮಾಮೇತಿ) ಎಂಬ ಮಾತಿನಿಂದಲೂ ಇದೇ ಸಿದ್ಧವು ( ೨. ೧. ೨೧ ) ೪೭

( ಆ ಅವತಾರಗಳು ದಿವ್ಯವಾದವು ಎಂಬುದಕ್ಕೆ— )

**ತಚ್ಚ ದಿವ್ಯಂ ಸ್ವಶಕ್ತಿಮಾತ್ರೋದ್ಭವಾತ್ ॥ ೨. ೧. ೨೨ ॥**

ಅವನ ಜನ್ಮಕರ್ಮಗಳಾದರೂ ಅವನ ಶಕ್ತಿಮಾತ್ರದಿಂದ ಉದ್ಭವಿಸಿದ್ದರಿಂದ ಅವು ದಿವ್ಯವಾದವುಗಳು ( ೨. ೧. ೨೨ ) ೪೮

( ಅವನು ನಿಷ್ಕಾರಣ ಪ್ರಾದುರ್ಭವಿಸುವುದಿಲ್ಲ ಎಂಬುದಕ್ಕೆ- )

**ಮುಖ್ಯಂ ತಸ್ಯ ಹಿ ಕಾರುಣ್ಯಮ್ ॥ ೨. ೧ ೨೩ ॥**

ಕಾರುಣ್ಯವೇ ಅವನ ಅವತಾರಗಳ ಅಥವಾ ಅವತಾರ ಕೃತ್ಯಗಳ ಮುಖ್ಯ ಮೂಲ ಉದ್ದೇಶವು ( ನಿಷ್ಕಾಮತೆಯಿಂದ ಪರದುಃಖ ಪರಿಹಾರ ಮಾಡುವುದೆ ಕಾರುಣ್ಯದ ಮುಖ್ಯ ಲಕ್ಷಣವು ) ( ೨. ೧. ೨೩ ) ೪೯.

( ಅವತಾರಗಳನ್ನು ಕುರಿತು ಭಕ್ತಿ ಮಾಡಿದರೆ ಮುಕ್ತಿ ದೊರಕಬಲ್ಲದು. ಆದರೆ ವಿಭೂತಿಗಳನ್ನು ಕುರಿತು ಮಾಡಿದ ಭಕ್ತಿ ಮುಕ್ತಿದಾಯಕವಲ್ಲ. ಯಾಕಂದರೆ— )

**ಪ್ರಾಣಿತ್ವಾನ್ನ ವಿಭೂತಿಷು ॥ ೨. ೧. ೨೪ ॥**

ವಿಭೂತಿ-ಭಕ್ತಿ ಸಲ್ಲದು. ಯಾಕಂದರೆ ವಿಭೂತಿಗಳು ( ಶುದ್ಧ ಚೈತನ್ಯವಲ್ಲದ ) ಪ್ರಾಣಾದಿಗಳಿಂದ ಯುಕ್ತವಾದವುಗಳು ( ೨. ೧. ೨೪ ) ೫೦

( ಇಲ್ಲಿ ವಿಭೂತಿ ಎಂದರೆ ಗೀತೆಯು ೧೦ನೇ ಅಧ್ಯಾಯದಲ್ಲಿ ಹೇಳಿದ ವಿಭೂತಿಗಳು. ಉದಾ: ನರಾಣಾಂ ಚ ನರಾಧಿಪಂ ( ಗೀತಾ ೧೦. ೨೭. ) ಇತ್ಯಾದಿ. )

( ಇದಲ್ಲದೆ ರಾಜಸೇವೆ ( ರಾಜನು ವಿಭೂತಿ ಇದ್ದರೂ ) ಮಾಡಕೂಡದು ( ಅರ್ಥಾತ್ ಇಲ್ಲಿ ಸೇವೆ ಅಂದರೆ ಪೂಜಾದಿಗಳು ) ಎಂದು ಧರ್ಮಶಾಸ್ತ್ರಗಳ ಹೇಳಿಕೆ ಇದೆ- )

**ದ್ಯೂತರಾಜಸೇವಯೋಃ ಪ್ರತಿಷೇಧಾಚ್ಚ ॥ ೨. ೧. ೨೫ ॥**

ಇದಲ್ಲದೆ ದ್ಯೂತ ಹಾಗೂ ರಾಜಸೇವೆ ಇವು ( ಧರ್ಮಶಾಸ್ತ್ರಗಳಲ್ಲಿ ) ನಿಷೇಧಿಸಲಾಗಿವೆ. ಆದುದರಿಂದ ವಿಭೂತಿ ಪೂಜೆ ಅಥವಾ ವಿಭೂತಿ ಭಕ್ತಿ ಸಲ್ಲದು ( ೨. ೧. ೨೫ ) ೫೧

( ಹಾಗಾದರೆ ' ವೃಷ್ಣೀನಾಂ ವಾಸುದೇವೋऽಸ್ಮಿ ' ( ಗೀತಾ ೧೦. ೩೭.) ಎಂದು ತಾನು ವಿಭೂತಿ ಎಂದು ಹೇಳಿದ್ದರಿಂದ ವಾಸುದೇವನ ಭಕ್ತಿಯೂ ಸಲ್ಲದು ಎಂದು ತಿಳಿಯಬೇಕೇ, ಎಂಬುದಕ್ಕೆ ಸಮಾಧಾನ- )

**ವಾಸುದೇವೇಽಪೀತಿ ಚೇನ್ನಾಕಾರಮಾತ್ರತ್ವಾತ್ ॥ ೨. ೧. ೨೬ ॥**

ವಾಸುದೇವ ಭಕ್ತಿಯೂ ಸಲ್ಲದು ಎಂದರೆ ಹಾಗಲ್ಲ. ಯಾಕಂದರೆ ವಾಸುದೇವನ ಆಕಾರ ಮಾತ್ರ ಮನುಷ್ಯನದು ( ಅವನು ಪ್ರತ್ಯಕ್ಷ ಭಗವಂತನು ) ( ೨. ೧. ೨೬ ) ೫೨

**ಪ್ರತ್ಯಭಿಜ್ಞಾನಾಚ್ಚ ॥ ೨. ೧. ೨೭ ॥**

ಹೀಗೆ ( ವಾಸುದೇವನು ಪ್ರತ್ಯಕ್ಷ ಭಗವಂತನು ಎಂದು ) ಒಪ್ಪಲಾಗಿದೆ ( ಉದಾ: ಗೀತಾ ೪. ೬. ಅಜೋऽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರಃ ಇತ್ಯಾದಿ) ಆದುದರಿಂದ ವಾಸುದೇವನ ಭಕ್ತಿ ಸಲ್ಲದು ಎನ್ನಲಾಗದು (೨. ೧. ೨೭) ೫೩

( ಹಾಗಾದರೆ ವಾಸುದೇವನು ವಿಭೂತಿ ಎಂದು ಹೇಳಿದ್ದೇಕೆ ಎಂಬುದಕ್ಕೆ ಉತ್ತರ — )

**ವೃಷ್ಣಿಷು ಶ್ರೇಷ್ಠ್ಯೇನ ತತ್ ॥ ೨. ೧. ೨೮ ॥**

ವಾಸುದೇವನು ವೃಷ್ಣಿಕುಲಶ್ರೇಷ್ಠನು ಎಂದು ಹೇಳುವ ಉದ್ದೇಶದಿಂದ ಮಾತ್ರ ಹಾಗೆ ( ಅವನು ವಿಭೂತಿ ಎಂದು ) ಹೇಳಲಾಗಿದೆ ( ಹೊರತು ಅವನು ಕೇವಲ ವಿಭೂತಿಯು, ಅವನು ಭಗವಂತನ ಅವತಾರನಲ್ಲ ಎಂದು ಹೇಳುವ ಉದ್ದೇಶ ವಿರಲಿಲ್ಲ ) ( ೨. ೧. ೨೮ ) ೫೪.

( ಇತರ ಅವತಾರಗಳಿಗೂ ಇದೇ ಮಾತು ಅನ್ವಯಿಸುವದು— )

**ಏವಂ ಪ್ರಸಿದ್ಧೇಷು ಚ ॥ ೨. ೧. ೨೯ ॥**

ಪ್ರಸಿದ್ಧ ಅವತಾರಗಳನ್ನು ಕುರಿತು ಸಹ ಇದೇ ಮಾತು ( ೨. ೧. ೨೯ ) ೫೫

## ಪ್ರಕರಣ ೨. ಭಾಗ ೨.

## ಗೌಣೀ ಭಕ್ತಿ

( ಇನ್ನು ಗೌಣೀ ಭಕ್ತಿಯು ಮುಖ್ಯಾ ಭಕ್ತಿಯ ಸಾಧನ ಎಂಬುದಕ್ಕೆ— )

**ಭಕ್ತ್ಯಾ ಭಜನೋಪಸಂಹಾರಾದ್ಗೌಣ್ಯಾ ಪರಾಯೈತದ್ಧೇತುತ್ವಾತ್ ॥ ೨. ೨. ೧ ॥**

ಭಜನವನ್ನು ಕುರಿತು ಕೊನೆ ಮಾತು ಹೇಳುವಾಗ ( ಗೀತಾ ೯. ೧೪. ) ' ಭಕ್ತಿಯಿಂದ ' ( ಭಕ್ತ್ಯಾ ) ಎಂಬ ಶಬ್ದ ಪ್ರಯೋಗವು ಗೌಣೀ ಭಕ್ತಿ ಎಂಬ ಅರ್ಥದಲ್ಲಿರುವದು.

ಯಾಕೆಂದರೆ ಗೌಣೀ ಭಕ್ತಿಯು ಪರಾ ಅಥವಾ ಮುಖ್ಯಾ ಭಕ್ತಿಯ ಸಾಧನವು ( ೨. ೨. ೧ ) ೫೬.

ರಾಗಾರ್ಥಪ್ರಕೀರ್ತಿಸಾಹಚರ್ಯಾಚ್ಚೇತರೇಷಾಮ್ ॥ ೨. ೨. ೨ ॥

ಭಗವಂತನ ವಿಶೇಷ ಸಂಕೀರ್ತನವು ( ಗೀತಾ ೧೧. ೩೬. ) ಆವನ ಒಗ್ಗೆ ಅನುರಾಗವನ್ನು ಅಥವಾ ಪರಮಪ್ರೀತಿಯನ್ನು ಹುಟ್ಟಿಸುತ್ತಿರುವುದರಿಂದ ಹಾಗೂ ಭಕ್ತಿಯ ಇತರ ರೂಪಗಳು ಆ ಸಂಕೀರ್ತನದೊಡನೆ ಹೇಳಲಾಗಿರುವುದರಿಂದ ( ಅವೆಲ್ಲವೂ ಮುಖ್ಯಾ ಭಕ್ತಿಯ ಸಾಧನಗಳು ) ( ೨. ೨. ೨ ) ೫೭

( ಉಳಿದ ಎಲ್ಲ ಭಕ್ತಿರೂಪಗಳು ಗೌಣ ಎಂಬುದಕ್ಕೆ– )

ಅಂತರಾಲೇ ತು ಶೇಷಾಃ ಸ್ಯುರುಪಾಸ್ಯಾದೌ ಚ ಕಾಂಡತ್ವಾತ್ ॥ ೨. ೨. ೩ ॥

ಮಿಕ್ಕ ಭಕ್ತಿರೂಪಗಳು ಈ ಮಧ್ಯೇ ( ಗೀತಾ ೯. ೧೩. ಹಾಗೂ ೯. ೨೯. ಈ ಶ್ಲೋಕಗಳ ನಡುವಿನ ಶ್ಲೋಕಗಳಲ್ಲಿ ) ಹೇಳಲಾಗಿವೆ. ಉಪಾಸ್ಯಗಳನ್ನು ಕುರಿತು ಹೇಳುವಾಗ ಸಹ ( ಉಪನಿಷದಾದಿಗಳಲ್ಲಿ ಉದಾ: ಛಾಂದೋಗ್ಯ ೩. ೧೮. ಮನೋ ಬ್ರಹ್ಮೇತ್ಯುಪಾಸೀತ ) ಆ ರೂಪಗಳು ಹೇಳಲಾಗಿವೆ. ( ಅವೆಲ್ಲವೂ ಗೌಣೀ ಭಕ್ತಿಯ ರೂಪಗಳು ) ಯಾಕೆಂದರೆ ಅವು ಬ್ರಹ್ಮ ಕಾಂಡದಲ್ಲಿರುವವು ( ಭಕ್ತಿಯೇ ಬ್ರಹ್ಮಕಾಂಡದ ಮುಖ್ಯ ವಿಷಯವು ) ( ೨. ೨. ೩ ) ೫೮

( ಗೌಣೀ ಭಕ್ತಿಯಿಂದ ಪಾವಿತ್ರ್ಯವುಂಟಾಗುವದು— )

ತಾಭ್ಯಃ ಪಾವಿತ್ರ್ಯಮುಪಕ್ರಮಾತ್ ॥ ೨. ೨. ೪ ॥

ವಿವಿಧರೂಪ ಗೌಣೀ ಭಕ್ತಿಯಿಂದ ಪಾವಿತ್ರ್ಯವುಂಟಾಗುವದು. ಹೀಗೆ ಆರಂಭದಲ್ಲಿ ( ಗೀತಾ ೯. ೨. ರಾಜವಿದ್ಯಾ ರಾಜ

ಗುಹ್ಯಂ ಪವಿತ್ರಮಿದಮುತ್ತಮಂ ) ಹೇಳಿದೆ ( ೨. ೨. ೪ ) ೫೯

( ಈ ಭಕ್ತಿರೂಪಗಳಿಗೆ ಮುಖ್ಯಾ ಭಕ್ತಿಯ ಸಾಹಚರ್ಯ ವಿದ್ದರೆ ಹೆಚ್ಚಿನ ಫಲವು ದೊರಕುವದು ಎಂಬುದಕ್ಕೆ– )

ತಾಸು ಪ್ರಧಾನಯೋಗಾತ್ ಫಲಾಧಿಕ್ಯಮೇಕೇ ॥ ೨. ೨. ೫ ॥

ಮುಖ್ಯಾ ಭಕ್ತಿಯೊಡನೆ ಈ ಭಕ್ತಿರೂಪಗಳು ( ಗೀತಾ ೯. ೨೬. ಪತ್ರಂ.... ಭಕ್ತ್ಯಾ ಪ್ರಯಚ್ಛತಿ ಇತ್ಯಾದಿ ) ಕಂಡು ಬಂದಲ್ಲಿ ಅಧಿಕಾಧಿಕ ಫಲವು ದೊರೆಯುವದು ಎಂದು ಹಲವರ ಅಭಿಪ್ರಾಯವಿರುವದು ( ೨. ೨. ೫ ) ೬೦

( ಜೈಮಿನಿಯ ಅಭಿಪ್ರಾಯವು ಬೇರೆ ಇದೆ— )

ನಾಮ್ನೇತಿ ಜೈಮಿನಿಃ ಸಂಭವಾತ್ ॥ ೨. ೨. ೬ ॥

( ಫಲಾಧಿಕ್ಯವನ್ನು ಹೇಳಲು ' ಭಕ್ತ್ಯಾ ಪ್ರಯಚ್ಛತಿ ' ಶಬ್ದ ಪ್ರಯೋಗವು ಮಾಡಲಾಗಿಲ್ಲ ) ಹೆಸರುಗೊಂಡು ಹೇಳುವ ಉದ್ದೇಶದಿಂದ ಈ ಶಬ್ದವು ಉಪಯೋಗಿಸಲಾಗಿದೆ ಹೊರತು ವಿಶೇಷ ಫಲ ದೊರೆಯುವದು ಎಂದು ಹೇಳುವದಕ್ಕಾಗಿಯಲ್ಲ ಎಂದು ಜೈಮಿನಿಯ ಮತವು. ಹೀಗೆ ಇರುವ ಸಂಭವವಿದೆ ( ೨. ೨. ೬ ) ೬೧



( ಗೌಣೀ ಭಕ್ತಿಯ ಪ್ರಯೋಗವನ್ನು ಕುರಿತು— )

ಅತ್ರಾಂಗಪ್ರಯೋಗಾನಾಂ ಯಥಾಕಾಲಸಂಭವೋ ಗೃಹಾದಿವತ್ ॥ ೨. ೨. ೭ ॥

ಈ ಗೌಣೀ ಭಕ್ತಿಯ ವಿವಿಧ ರೀತಿಗಳನ್ನು ( ಸ್ಮರಣ, ಕೀರ್ತನ, ಪೂಜೆ, ಪತ್ರಪುಷ್ಪಾದಿಗಳ ಅರ್ಪಣ ಇತ್ಯಾದಿ ) ಸ್ಥಲ ಕಾಲಾನುಕೂಲತೆ ನೋಡಿ ಪ್ರಯೋಗಿಸಬಹುದು. ( ಎಲ್ಲವನ್ನು ಒಮ್ಮೆಲೆ ಮಾಡಬೇಕೆಂದು ನಿಯಮವಿಲ್ಲ ) ಮನೆಗೆ ಬೇಕಾಗುವ

ಉಪಕರಣಗಳಂತೆ ( ಅವುಗಳನ್ನು ಯಥಾಸಂಭವ ಕೂಡಿಸುವ ದುಂಟು ) ( ೨. ೨. ೭ ) ೬೭

( ಈ ರೀತಿಗಳಲ್ಲಿ ಯಾವುದು ಶ್ರೇಷ್ಠ ಎಂದು ಕೇಳಿದರೆ— )

**ಈಶ್ವರತುಷ್ಟೇರೇಕೋಽಪಿ ಬಲೀ ॥ ೨. ೨. ೮ ॥**

ಈ ರೀತಿಗಳಲ್ಲಿ ಒಂದೇ ರೀತಿಯನ್ನು ಚನ್ನಾಗಿ ಅನುಸರಿಸಿದರೂ ಅದು ಭಗವಂತನನ್ನು ತೋಷಿಸುವುದರಿಂದ ಸಾಕಷ್ಟು ಸಾಮರ್ಥ್ಯವುಳ್ಳದ್ದು ಎಂದು ಹೇಳಬಹುದು ( ೨. ೨. ೮ ) ೬೩

( ಸರ್ವಾರ್ಪಣಕ್ಕೆ ಏನು ಅವಶ್ಯ ಎಂಬ ಪ್ರಶ್ನೆಗೆ— )

**ಅಬಂಧೋಽರ್ಪಣಸ್ಯ ಮುಖಮ್ ॥ ೨. ೨. ೯ ॥**

ಬಂಧನ ರಹಿತವಾಗುವುದೆ ( ಅನಾಸಕ್ತವಾಗುವದು ) ಸರ್ವಾರ್ಪಣದ ಮುಖ್ಯ ಸಾಧನವು ( ೨. ೨. ೯ ) ೬೪

( ಯಾವ ರೂಪದ ಧ್ಯಾನ ಮಾಡಬೇಕು ಎಂಬುದಕ್ಕೆ— )

**ಧ್ಯಾನನಿಯಮಸ್ತು ದೃಷ್ಟಸೌಕರ್ಯಾತ್ ॥ ೨. ೨. ೧೦ ॥**

ಪ್ರತ್ಯಕ್ಷ ನೋಡಿದುದನ್ನು ಧ್ಯಾನಿಸುವದು ಸುಲಭವಿರುವುದರಿಂದ ಆ ಸಂಗತಿಯನ್ನನುಸರಿಸಿ ಧ್ಯಾನದ ನಿಯಮಗಳು ಮಾಡಲಾಗಿವೆ ( ಇಂತಹ ಸ್ವರೂಪವನ್ನೇ ಧ್ಯಾನಿಸಬೇಕೆಂಬ ನಿಯಮವಿಲ್ಲ. ಆದರೆ ಭಗವಂತನ ಸ್ವರೂಪವೆಂದು ಯಾವುದರ ಧ್ಯಾನವು ಒಳ್ಳೆ ಫಲಕಾರಿಯಾಗಬಹುದೊ ಅದನ್ನು ಧ್ಯಾನಿಸುವ ನಿಯಮವಿರುವದು. ಸ್ಥಿರಚಿತ್ತತ್ವ, ತನ್ಮಯತೆ ಇವೇ ಧ್ಯಾನದ ಉದ್ದೇಶಗಳು ) ( ೨. ೨. ೧೦ ) ೬೫

## ಪೂಜೆ

**ತದ್ಯಜಿಃ ಪೂಜಾಯಾಮ್ ಇತರೇಷಾಂ ನೈವಮ್ ॥ ೨. ೨. ೧೧ ॥**

ಇಲ್ಲಿ ಯಜ್ ಶಬ್ದವು ( ಗೀತಾ ೯. ೨೫. ಮತ್ತು ೩೪. ) ಪೂಜೆ ಎಂಬರ್ಥದಲ್ಲಿದೆ. ಬೇರೆ ಕಡೆಗೆ ಹೀಗೆ ಅರ್ಥವಿಲ್ಲ. ( ಅಲ್ಲಿ ಯಜ್ಞ ಮಾಡು ಎಂಬರ್ಥವೇ ಇದೆ ) ( ೨. ೨. ೧೧ ) ೬೬

( ಪಾದೋದಕವೆಂದರೇನು ಎಂಬುದಕ್ಕೆ-- )

**ಪಾದೋದಕಂ ತು ಪಾದ್ಯಮವ್ಯಾಪ್ತೇಃ ॥ ೨. ೨. ೧೨ ॥**

ಪಾದೋದಕವೆಂದರೆ ಪಾದ ತೊಳೆಯಲು ಕೊಟ್ಟ ನೀರು. ಬೇರೆ ಅರ್ಥ ಮಾಡಿದರೆ ಆ ಅರ್ಥವು ಎಲ್ಲ ಕಡೆಗೆ ಅನ್ವಯಿಸುವುದಿಲ್ಲ. ( ಈ ಅರ್ಥ ಮಾಡದಿದ್ದರೆ ಇನ್ನೆರಡು ಅರ್ಥಗಳನ್ನು ಮಾಡಬಹುದು- ಪಾದಕ್ಕೆ ಸಂಬಂಧಿಸಿದ ನೀರು ಅಥವಾ ಪಾದವನ್ನು ತೊಳೆದ ನೀರು. ಈ ಎರಡು ಅರ್ಥಗಳು ಎಲ್ಲ ಕಡೆಗೂ ಅನ್ವಯಿಸಲಾರವು. ಯಾಕಂದರೆ ಭಗವಂತನ ಕಾಲಿನ ನೀರು ಎಂಬುದಕ್ಕೆ ಗಂಗೆಯ ನೀರು ಎಂಬರ್ಥವಾಗಬಹುದು. ಆದರೆ ಪಾದೋದಕವೆಂದರೆ ಗಂಗಾನದಿಯ ನೀರೇ ಎಂದು ಹೇಳಲಿಕ್ಕಾಗುವುದಿಲ್ಲ. ಶಾಲಿಗ್ರಾಮಾದಿ ವಿಗ್ರಹಗಳಲ್ಲಿ ಪಾದಗಳೇ ಇಲ್ಲದ್ದರಿಂದ ಅಲ್ಲಿ ಪಾದ ತೊಳೆದ ನೀರು ಎಂಬುದು ಅನ್ವರ್ಥಕವಾಗಲಾರದು) ( ೨. ೨. ೧೨ ) ೬೭

**ಸ್ವಯಮರ್ಪಿತಂ ಗ್ರಾಹ್ಯಮವಿಶೇಷಾತ್ ॥ ೨. ೨. ೧೩ ॥**

ತಾನು ಭಗವಂತನಿಗೆ ಅರ್ಪಿಸಿದುದನ್ನು ( ಫಲ ಪುಷ್ಪಾದಿ ) ಭಕ್ತನು ತಾನೇ ಮರಳಿ ಪಡೆಯಬಹುದು. ಯಾಕಂದರೆ ಅದನ್ನು ಇಂಥವರಿಗೇ ಕೊಡಬೇಕು ಎಂಬ ವಿಧಿ ಇಲ್ಲ ( ೨. ೨. ೧೩ ) ೬೮

( ಪೂಜಾ ವಿಧಿಯಲ್ಲಿ ತಪ್ಪಾದರೆ- )

**ನಿಮಿತ್ತಗುಣವ್ಯಪೇಕ್ಷಣಾದಪರಾಧೇಷು ವ್ಯವಸ್ಥಾ ॥ ೨. ೨. ೧೪ ॥**

ಪೂಜೆ ಮಾಡುವಾಗ ವಿಧಿಯಲ್ಲಿ ಏನಾದರೂ ಲೋಪ ದೋಷಗಳಾದರೆ ಆಯಾ ಲೋಪದೋಷಗಳ ಗುಣ ಮತ್ತು ಪ್ರಸಂಗಗಳಿಗೆ ಅನುಸರಿಸಿ ( ಅವುಗಳನ್ನು ಹೋಗಲಾಡಿಸುವ ) ವ್ಯವಸ್ಥೆ ಮಾಡಲಾಗಿದೆ ( ೨. ೨. ೧೪ ) ೬೯

( 'ಪತ್ರಂ ಪುಷ್ಪಂ' ಇದರ ವ್ಯಾಪಕತೆ-- )

**ಪತ್ರಾದೇರ್ದಾನಮನ್ಯಥಾ ಹಿ ವೈಶಿಷ್ಟ್ಯಮ್ ॥ ೨. ೨. ೧೫ ॥**

ಪತ್ರಂ ಪುಷ್ಪಂ ಫಲಂ ತೋಯಂ ( ಗೀತಾ ೯. ೨೬ ) ಎಂದರೆ ( ಬರೀ ನಾಲ್ಕೇ ವಸ್ತುಗಳು ಎಂದರ್ಥವಲ್ಲ ) ಪತ್ರಾದಿ ಎಲ್ಲ ವಸ್ತುಗಳ ಅರ್ಪಣ. ಹಾಗೆ ಅರ್ಥ ಮಾಡದಿದ್ದರೆ ಅರ್ಪಣ ಕಾರ್ಯಕ್ಕೆ ಸಂಕೋಚವುಂಟಾಗುವದು ( ಅದು ಇಷ್ಟವಿಲ್ಲ, ಯಥಾರ್ಥವೂ ಇಲ್ಲ ) ( ೨. ೨. ೧೫ ) ೭೦

( ಇತರ ಕ್ರಿಯೆಗಳಿಗಿಂತ ಈ ಭಕ್ತಿಕ್ರಿಯೆಗಳು ಶ್ರೇಷ್ಠ ಎಂಬುದಕ್ಕೆ— )

**ಸುಕೃತಜತ್ವಾತ್ ಪರಹೇತುಭಾವಾಚ್ಚ ಕ್ರಿಯಾಸು ಶ್ರೇಯಸ್ಯಃ ॥ ೨. ೨. ೧೬ ॥**

ಇವು ( ಗೌಣೀ ಭಕ್ತಿಯ ವಿವಿಧ ವಿಧಿ ಹಾಗೂ ಕ್ರಿಯೆಗಳು ) ಎಲ್ಲ ಮಿಕ್ಕ ಕ್ರಿಯೆಗಳಿಗಿಂತ ಹೆಚ್ಚು ಶ್ರೇಯಸ್ಕರವಾದವುಗಳು. ಯಾಕಂದರೆ ಇವು ಸತ್ಕಾರ್ಯಮೂಲಕವಾದವುಗಳು ಹಾಗೂ ಮುಖ್ಯಾ ಭಕ್ತಿಯನ್ನು ಸಾಧಿಸಲು ಕೈಕೊಂಡವುಗಳು ( ೨. ೨. ೧೬ ) ೭೧

**ಗೌಣಂ ತ್ರೈವಿಧ್ಯಮಿತರೇಣ ಸ್ತುತ್ಯರ್ಥತ್ವಾತ್ಸಾಹಚರ್ಯಮ್ ॥ ೨. ೨. ೧೭ ॥**

ತ್ರಿವಿಧ ಭಕ್ತಿಯು ( ಆರ್ತ, ಜಿಜ್ಞಾಸು, ಅರ್ಥಾರ್ಥಿ ) ಗೌಣವು. ಸ್ತುತಿ ಮಾಡುವ ಉದ್ದೇಶದಿಂದ ಇವುಗಳನ್ನು

ಮುಖ್ಯಾ ಭಕ್ತಿಯೊಡನೆ ಹೇಳಿದ್ದಾರೆ ( ಗೀತಾ ೭. ೧೬. ಚತುರ್ವಿಧಾ ಭಜಂತೇ ಇತ್ಯಾದಿ ) ( ೨. ೨. ೧೭ ) ೭೨

ಶ್ರವಣಾದಿ ನವವಿಧ ಭಕ್ತಿಗಳ ( ಭಾಗವತ ೭. ೨೨-೨೩ ) ಸ್ಥಾನವು ಹೇಳಲಾಗಿದೆ- )

**ಬಹಿರಂತರಸ್ಥಮುಭಯಮವೇಷ್ಟಿಸವವತ್ ॥ ೨. ೨. ೧೮ ॥**

ಅವೇಷ್ಟಿಯೆಂಬ ಯಜ್ಞದಂತೆ ಶ್ರವಣಾದಿ ಭಕ್ತಿವಿಧಗಳು (ಮುಖ್ಯಾ ಭಕ್ತಿಯ) ಅಂಗವಾಗಿ ಇಲ್ಲವೆ ಸ್ವತಂತ್ರವಾಗಿ ಇರಬಲ್ಲವು. ( ಅವೇಷ್ಟಿ ಯಜ್ಞವು ರಾಜಸೂಯ ಯಜ್ಞದ ಅಂಗವಾಗಿಯೂ ಸ್ವತಂತ್ರವಾಗಿಯೂ ಮಾಡಲಾಗುತ್ತಿದೆ. ಹೇಗೆ ಮಾಡಿದರೂ ಅದು ಫಲ ಕೊಡುವದು. ಶ್ರವಣಾದಿಗಳು ಮುಖ್ಯಾಭಕ್ತಿಯ ಅಂಗವಾಗಿ ಆಚರಿಸಲ್ಪಟ್ಟರೆ ಮುಖ್ಯಾಭಕ್ತಿಯನ್ನು ಪೋಷಿಸಿ ಫಲ ಕೊಡುವವು. ಸ್ವತಂತ್ರ ರೀತಿಯಿಂದ ಆಚರಿಸಿದರೂ ಭಗವಂತನ ಪ್ರಸಾದರೂಪ ಫಲವನ್ನು ದೊರಕಿಸುವವು ) ( ೨. ೨. ೧೮ ) ೭೩

( ಆರ್ತನು ಮಾಡುವ ಸ್ಮರಣಾದಿಗಳ ಸ್ವರೂಪ- )

**ಸ್ಮೃತಿಕೀರ್ತ್ಯೋಃ ಕಥಾದೇಶ್ಚಾರ್ತೌ ಪ್ರಾಯಶ್ಚಿತ್ತಭಾವಾತ್ ॥ ೨. ೨. ೧೯ ॥**

ಆರ್ತಭಕ್ತನು ಮಾಡುವ ನಾಮಸ್ಮರಣ, ಕೀರ್ತನ, ಕಥಾದಿಗಳು ಪ್ರಾಯಶ್ಚಿತ್ತಸ್ವರೂಪದವು ( ೨. ೨. ೧೯ ) ೭೪

( ಹಾಗಾದರೆ ಬೇರೆ ಪ್ರಾಯಶ್ಚಿತ್ತಗಳ ನಿಷೇಧವು ಮಾಡಲಾಗಿದೆಯೋ ಎಂಬುದಕ್ಕೆ— )

**ಭೂಯಸಾಮನನುಷ್ಠಿತಿರಿತಿ ಚೇದಾಪ್ರಯಾಣಮುಪ ಸಂಹಾರಾನ್ಮಹತ್ಸ್ವಪಿ ॥ ೨. ೨. ೨೦**

ಇವು ( ಸ್ಮರಣಾದಿ ) ಸಾಯುವ ವರೆಗೆ ಸತತ ನಡೆಯ ತಕ್ಕವುಗಳು ಹಾಗೂ ಮಹಾಪಾಪಗಳನ್ನು ಸಹ ಪರಿಹರಿಸು ವಂಥವುಗಳು ( ಗೀತಾ ೯. ೩೦-೩೧ ) ಇರುವುದರಿಂದ ಕಠಿಣ ಪ್ರಾಯಶ್ಚಿತ್ತಾದಿಗಳನ್ನು ಮಾಡುವದು ಅವಶ್ಯವಿಲ್ಲ ಎನ್ನ ಬಹುದು (ಆದರೆ ಹಾಗಲ್ಲ. ಇವೂ ಅಷ್ಟೇ ಕಠಿಣ ಹಾಗೂ ಫಲಕಾರಿ ಇರುವುದರಿಂದ ಇವೂ ಹೆಚ್ಚಿನ ಪ್ರಾಯಶ್ಚಿತ್ತಗಳೇ) ( ೨. ೨. ೨೦ ) ೭೫

( ಪಾಪಹರಣ ವಿಷಯದಲ್ಲಿ ಶ್ರವಣಾದಿಗಳ ಮಹತ್ವ— )

ಲಘ್ವಪಿ ಭಕ್ತಾಧಿಕಾರೇ ಮಹತ್ಕ್ಷೇಪಕಮಪರಸರ್ವಹಾ. ನಾತ್ ॥ ೨. ೨. ೨೧ ॥

( ಸ್ಮರಣಾದಿ ) ಕಾಣಲಿಕ್ಕೆ ಕಿರುಕುಳವಾದರೂ ಭಕ್ತನ ಅಧಿಕಾರದ ಮೂಲಕ ಈ ಕ್ರಿಯೆಗಳು ಎಲ್ಲ ಪಾಪಗಳ ನಾಶ ಮಾಡುವುದರಿಂದ ಮಹಾಪಾಪಗಳನ್ನು ಸಹ ಹೋಗಲಾಡಿಸು ವವು ( ೨. ೨. ೨೧ ) ೭೬

(ಪ್ರಾಯಶ್ಚಿತ್ತದ ಕಾರ್ಯವನ್ನು ಸ್ಮರಣಾದಿಗಳು ಮಾಡು ವವು. ಪ್ರಾಯಶ್ಚಿತ್ತದ ಸ್ಥಾನದಲ್ಲಿ ಅವು ಇರುವವು. ಪ್ರಾಯ ಶ್ಚಿತ್ತದ ಎಲ್ಲ ಧರ್ಮಗಳು ಅದರಲ್ಲಿಲ್ಲದಿದ್ದರೂ ಮುಖ್ಯ ಧರ್ಮವ (ಪಾಪಕ್ಷಾಲನ ) ಅವುಗಳಲ್ಲಿರುವದು-)

ತತ್ಸ್ಥಾನತ್ವಾದನನ್ಯಧರ್ಮಃ ಖಲೇವಾಲೀವತ್ ॥ ೨. ೨. ೨೨ ॥

ಅದರ ( ಪ್ರಾಯಶ್ಚಿತ್ತದ ) ಸ್ಥಾನದಲ್ಲಿರುವುದರಿಂದ ಅದರ ಮುಖ್ಯ ಧರ್ಮ ( ಪಾಪಕ್ಷಾಲನ ) ಸ್ಮರಣಾದಿಗಳಲ್ಲಿರುವದು. ಕಣದಲ್ಲಿಯ ಕಂಬವು ಯಜ್ಞಕಾಲದಲ್ಲಿ ಯೂಪದ ಕಾರ್ಯ ಮಾಡುವಂತೆ ( ಆಕೃತಿ ಮುಂತಾದ ಇತರ ಗೌಣಧರ್ಮಗಳು ಅದರಲ್ಲಿಲ್ಲದಿದ್ದರೂ ) ( ೨. ೨. ೨೨ ) ೭೭

## ಮುಕ್ತದ್ವಾರ

( ಭಕ್ತಿಮಾರ್ಗದ ದ್ವಾರವು ಎಲ್ಲರಿಗೂ ತೆರೆದಿದೆ- )

**ಆನಿಂದ್ಯಯೋನ್ಯಧಿಕ್ರಿಯತೇ ಪಾರಂಪರ್ಯಾತ್ ಸಾಮಾನ್ಯ-ವತ್ ॥ ೨. ೨. ೨೩ ॥**

ಹೀನ ಕುಲದವರೆನಿಸಿಕೊಳ್ಳುವವರಿಗೆ ಸಹ ಸಾಮಾನ್ಯ ಜ್ಞಾನ ಪಡೆಯಲು ಮುಕ್ತದ್ವಾರವಿರುವಂತೆ ಪರಂಪರೆಯಿಂದ ಭಕ್ತಿಮಾರ್ಗವನ್ನನುಸರಿಸಲು ಅಧಿಕಾರವಿದೆ ( ೨. ೨. ೨೩ ) ೭೮

( ಈ ಜನ್ಮದಲ್ಲಿ ಸಾಧನವು ಅಪೂರ್ಣ ಉಳಿದು ದೇವ ಲೋಕಕ್ಕೆ ಹೋದರೆ— )

**ಅತೋಽಹ್ಯವಿಪಕ್ವಭಾವಾನಾಮಪಿ ತಲ್ಲೋಕೇ ॥ ೨. ೨. ೨೪ ॥**

ಆದುದರಿಂದ ( ಎಲ್ಲರಿಗೂ ಮುಕ್ತದ್ವಾರವಿರುವುದರಿಂದ ಹೀನ ಯೋನಿಯವರಂತೆ ದೇವಲೋಕಕ್ಕೆ ಹೋದವರು ಸಹ ಭಕ್ತಿ ಮಾಡುವರು ಎಂದರ್ಥ) ದೇವಲೋಕದಲ್ಲಿ ಅಪಕ್ವ ಉಳಿದ ಭಕ್ತರು ಸಹ ತಮ್ಮ ಭಕ್ತಿಯನ್ನು ಮುಂದೆ ಸಾಗಿಸುವರು ( ೨. ೨. ೨೪ ) ೭೯

( ಸಾಧನವು ಪೂರ್ಣವಾದವರಿಗೆ ದೇವಲೋಕದಲ್ಲಿ ಸಾಧನದ ಅವಶ್ಯಕತೆ ಇಲ್ಲ. )

**ಕ್ರಮೈಕಗತ್ಯುಪಪತ್ತೇಸ್ತು ॥ ೨. ೨. ೨೫ ॥**

ಭಕ್ತನು ಕ್ರಮವಾಗಿ ಅಥವಾ ಒಂದೇ ಬಲವಾದ ಪ್ರಯತ್ನದಿಂದ ಭಗವತ್ಪಾದಗಳನ್ನು ಪಡೆಯುವನು ಎಂದು ಹೇಳಲಾಗಿರುವುದರಿಂದ ( ಆ ಲೋಕವನ್ನು ಪಡೆದ ಸಿದ್ಧನಿಗೆ ಮುಂದೆ ಭಕ್ತಿಯ ಅವಶ್ಯಕತೆಯಿಲ್ಲ ) ( ೨. ೨. ೨೫ ) ೮೦

**ಉತ್ಕ್ರಾಂತಿ ಸ್ಮೃತಿವಾಕ್ಯಶೇಷಾಚ್ಚ ॥ ೨. ೨. ೨೬ ॥**

( ಪೂರ್ಣ ಅಪೂರ್ಣ ಭಕ್ತರ ನಡುವಿನ ಈ ಭೇದವು ಮತ್ತೆ ಈ ವಾಕ್ಯದಿಂದ ಸಿದ್ಧಮಾಡಲಾಗಿದೆ. )

ಮೇಲಕ್ಕೆ ದೇವಲೋಕಕ್ಕೆ ಭಕ್ತನು ಹೋಗುವಾಗ ಭಗವಂತನ ಸ್ಮರಣ ಮಾಡುವನು ಎಂದು ಈ ಸಂದರ್ಭದಲ್ಲಿ ವಾಕ್ಯವಿರುವುದರಿಂದ ( ಗೀತಾ ೮. ೧೩ ) ( ಇದೇ ಮಾತು ಸಿದ್ಧವಾಗುವದು ) ( ೨. ೨. ೨೬ ) ೮೧

( ಪಾತಕಿಗಳು ಯಾವ ಮಾರ್ಗದಿಂದ ಸಾಗಬೇಕು ಎಂಬು ದಕ್ಕೆ— )

**ಮಹಾಪಾತಕಿನಾಂ ತ್ವಾರ್ತೌ ॥ ೨. ೨. ೨೭ ॥**

ಮಹಾಪಾತಕಿಗಳಿದ್ದವರು ಆರ್ತಭಕ್ತಿಯ ಮಾರ್ಗವನ್ನು ಹಿಡಿಯಬೇಕು ( ಆವರಿಗೆ ಅದೇ ಉತ್ತಮ ) ( ೨. ೨. ೨೭ ) ೮೨

## ಶ್ರೇಷ್ಠ ಭಕ್ತಿ

**ಸೈಕಾಂತಭಾವೋ ಗೀತಾರ್ಥಪ್ರತ್ಯಭಿಜ್ಞಾನಾತ್ ॥ ೨. ೨. ೨೮ ॥**

ಏಕಾಂತ ಭಾವವೆ ಎಲ್ಲಕ್ಕೂ ಹೆಚ್ಚಿನ ಭಕ್ತಿಯ ಲಕ್ಷಣವು. ಯಾಕಂದರೆ ಗೀತೆಯ ತಾತ್ಪರ್ಯವು ಇದೇ ಎಂದು ಒಪ್ಪಲಾಗಿದೆ. ( ೨. ೨. ೨೮ ) ೮೩

( ಪರಾಭಕ್ತಿ ಮಾಡಿಯೇ ಎಲ್ಲರೂ ಕೃತಾರ್ಥರಾಗತಕ್ಕದ್ದು ಎಂಬುದಕ್ಕೆ— )

**ಪರಾಂ ಕೃತ್ವೈವ ಸರ್ವೇಷಾಂ ತಥಾಹ್ಯಾಹ ॥ ೨. ೨. ೨೯ ॥**

ಪರಾಭಕ್ತಿ ಅಥವಾ ಮುಖ್ಯಾ ಭಕ್ತಿಯನ್ನು ಮಾಡಿಯೇ ಸರ್ವರ ಧ್ಯೇಯ ಸಾಧನೆ ( ಮೋಕ್ಷ ) ಆಗಬಲ್ಲದು ಎಂದು ಭಗವಂತನ ವಚನವಿದೆ ( ಗೀತಾ ೧೮. ೬೮ ) ( ೨. ೨. ೨೯ ) ೮

## ಪ್ರಕರಣ ೩. ಭಾಗ ೧

## ಸೃಷ್ಟಿ ಮತ್ತು ಪರಮಾತ್ಮ

**ಭಜನೀಯೇನಾದ್ವಿತೀಯಮಿದಂ ಕೃತ್ಸ್ನಸ್ಯ ತತ್ಸ್ವರೂಪತ್ವಾತ್ ॥ ೩. ೧. ೧ ॥**

ಇದು ( ಜ್ಞಾನವಿಷಯವಾದ ಸೃಷ್ಟಿ ) ಭಜನೀಯ ಭಗವಂತನಿಂದ ( ಭಜನವಿಷಯವಾದ ಭಗವಂತನಿಂದ ) ಎರಡನೆಯದು ಅಥವಾ ಪ್ರತ್ಯೇಕ ಇಲ್ಲ. ಯಾಕಂದರೆ ಇದೆಲ್ಲವೂ ಆ ಭಗವಂತನ ಸ್ವರೂಪವೇ ಇರುವದು ( ೩. ೧. ೧ ) ೮೫

**ತಚ್ಛಕ್ತಿರ್ಮಾಯಾ ಜಡಸಾಮಾನ್ಯಾತ್ ॥ ೩. ೧. ೨. ॥**

ಸಕಲ ಜಡಪದಾರ್ಥಗಳಿಗೆ ಸಹ ಸಾಮಾನ್ಯವಾಗಿರುವುದರಿಂದ ಮಾಯೆ ( ಗೀತಾ ೭. ೧೪. ವಿವಿಧ ರೂಪ ಧರಿಸುವ ಶಕ್ತಿ ) ಅವನ ಶಕ್ತಿ ಎನಿಸುವದು ( ೩. ೧. ೨ ) ೮೬

**ವ್ಯಾಪಕತ್ವಾದ್ವ್ಯಾಪ್ಯಾನಾಮ್ ॥ ೩ ೧. ೩ ॥**

ವ್ಯಾಪ್ಯವು ( ಸೃಷ್ಟಿಯು ) ವ್ಯಾಪಕತ್ವ ಗುಣದಿಂದ ( ಭಗವಂತನಿಂದ ವ್ಯಾಪ್ತವಿರುವ ಗುಣ ) ಯುಕ್ತವು. ಆದುದರಿಂದ ಸೃಷ್ಟಿಯು ಭಗವಂತನಿಂದಲೆ ಸೃಷ್ಟವು ( ೩. ೧. ೩ ) ೮೭

( ಸೃಷ್ಟಿಯು ಪ್ರಾಣಿಗಳ ಬುದ್ಧಿಯಿಂದ ಹುಟ್ಟುವದು ಎಂದು ನಾಸ್ತಿಕರು ಹೇಳುವರು. ಅದರ ನಿಷೇಧ— )

**ನ ಪ್ರಾಣಿಬುದ್ಧಿಭ್ಯೋಽಸಂಭವಾತ್ ॥ ೩. ೧. ೪ ॥**

ಪ್ರಾಣಿಗಳ ಬುದ್ಧಿಯಿಂದ ಸೃಷ್ಟಿಯು ಉದ್ಭವಿಸದು. ಯಾಕಂದರೆ ಅದು ಅಸಂಭವವು ( ೩. ೧. ೪ )

**ನಿರ್ಮಾಯೋಚ್ಚಾವಚಂ ಶ್ರುತೀಶ್ಚ ನಿರ್ಮಿಮೀತೇ ಪಿತೃವತ್ ॥ ೩. ೧. ೫ ॥**

ಸಕಲ ಉಚ್ಚ ನೀಚ ಪದಾರ್ಥಗಳನ್ನು ನಿರ್ಮಿಸಿ ಭಗ ವಂತನು ತಂದೆಯಂತೆ ಮಕ್ಕಳ (ಉದ್ಧಾರ ಮಾಡುವ ಪ್ರೀತಿ ಯಿಂದ) ವೇದಗಳನ್ನು ನಿರ್ಮಿಸಿದನು (೩. ೧. ೫) ೮೯

(ವೇದದಲ್ಲಿ ಹಲವು ಕಡೆಗೆ ಮಿಶ್ರ ಉಪದೇಶ ಮಾಡಿರು ವುದರಿಂದ ಭಗವಂತನು ತಂದೆಯಲ್ಲ ಎಂದರೆ— )

**ಮಿಶ್ರೋಪದೇಶಾನ್ನೇತಿ ಚೇನ್ನ ಸ್ವಲ್ಪತ್ವಾತ್ ॥ ೩. ೧. ೬ ॥**

ವೇದಗಳಲ್ಲಿ ಮಿಶ್ರ (ಸಂದಿಗ್ಧ) ಉಪದೇಶ ಮಾಡಿರುವುದ ರಿಂದ ಭಗವಂತನು ತಂದೆಯಂತೆ ಇಲ್ಲ ಎಂದು ಯಾರಾದರೂ ಅಂದರೆ ಹಾಗಲ್ಲ. ಯಾಕಂದರೆ ಅಂಥ ಮಿಶ್ರ ಉಪದೇಶದ ಪ್ರಮಾಣವು ಬಹಳ ಅಲ್ಪವಿರುವದು (೩. ೧. ೬) ೯೦

(ಉದಾ: ಪೂರ್ಣ ಅಹಿಂಸೆಯ ಉಪದೇಶವು ಎಲ್ಲ ಕಡೆ ಇದ್ದರೂ ಯಜ್ಞಕಾಲದಲ್ಲಿ ಹಿಂಸೆ ಹೇಳಲಾಗಿದೆ. ಇಂಥ ಉಪದೇಶದ ಪ್ರಮಾಣವು ಬಹಳ ಅಲ್ಪ ಎಂದು ಸೂತ್ರಕಾರರು ಸಮಾಧಾನ ಹೇಳಿರುವರು.)

(ಇನ್ನು ಫಲ ವಿಚಾರ. ಯಾರಿಂದ ಫಲ ಎಂಬುದಕ್ಕೆ—)

**ಫಲಮಸ್ಮಾದ್ಬಾದರಾಯಣೋ ದೃಷ್ಟತ್ವಾತ್ ॥ ೩. ೧. ೭ ॥**

ಸಕಲ ಫಲವು (ಕರ್ಮಗಳ ಫಲವು) ಭಗವಂತನಿಂದಲೇ ಬರುವದು ಎಂದು ಬಾದರಾಯಣ ಮುನಿಯ ಮತವು. ಯಾಕಂದರೆ ಹಾಗೆ ಆಗುತ್ತಿರುವದು ಪ್ರತ್ಯಕ್ಷ ಕಾಣುವದು (ಸುಷ್ಟ ದುಷ್ಟ ಫಲಗಳೆಲ್ಲ ಭಗವಂತನ ಇಚ್ಛಾಮಾತ್ರದಿಂದ ಲಭಿಸುವವು) (೩. ೧. ೭) ೯೧

(ಸೃಷ್ಟಿಲಯದ ಬಗ್ಗೆ— )

**ವ್ಯುತ್ಕ್ರಮಾದಪ್ಯಯಸ್ತಥಾ ದೃಷ್ಟಮ್ ॥ ೩. ೧. ೮ ॥**

ಪದಾರ್ಥವು ಪುನಃ ಮೂಲ ರೂಪವನ್ನು ತಾಳಲಾಗಿ (ಮಡಿಕೆ ಪುನಃ ಮಣ್ಣಾಗಲಾಗಿ) ಅದು ಲಯ ಹೊಂದುವದು. ಇದರಂತೆ ಕಂಡುಬರುವದು (೩. ೧. ೮) ೯೨

## ಪ್ರಕರಣ ೩. ಭಾಗ ೨.

## ಜೀವ ಮತ್ತು ಪರಮಾತ್ಮ

(ಎರಡರ ಐಕ್ಯವನ್ನು ಕುರಿತು— )

**ತದೈಕ್ಯಂ ನಾನಾತ್ವೈಕತ್ವಮುಪಾಧಿಯೋಗಹಾನಾದಾದಿತ್ಯ-ವತ್ ॥ ೩. ೨. ೧. ॥**

ಆ (ಜೀವಾತ್ಮಪರಮಾತ್ಮರ) ಐಕ್ಯವು ಉಪಾಧಿಯ (ಮನಸು ಇದೇ ಉಪಾಧಿ) ಸಂಯೋಗ ವಿಯೋಗದ ಮೂಲಕ ನಾನಾತ್ವ ಹಾಗೂ ಏಕತ್ವ ಎಂಬ ರೂಪ ತಾಳುವದು. ಸೂರ್ಯನಂತೆ (ಪ್ರಕಾಶರೂಪ ಸೂರ್ಯನು ಒಬ್ಬನೇ ಇದ್ದರೂ ಕನ್ನಡಿಗಳೆಂಬ ಉಪಾಧಿಗಳ ಮೂಲಕ ಅನೇಕ ಕಾಣುವನು. ಆ ಕನ್ನಡಿಗಳನ್ನು ತೆಗೆದುಬಿಟ್ಟೊಡನೆ ಅವನು ಏಕಮೇವ ಕಾಣುವನು) (೩. ೨. ೧) ೯೩

**ಪೃಥಗಿತಿ ಚೇನ್ನ ಪರೇಣಾಸಂಬಂಧಾತ್ ಪ್ರಕಾಶಾನಾಮ್ ॥ ೩. ೨. ೨. ॥**

ಜೀವಾತ್ಮರು ಬೇರೆ ಬೇರೆ ಇವೆ ಎಂದರೆ ಹಾಗಲ್ಲ. ಯಾಕಂದರೆ ಹಾಗೆ ತಿಳಿದರೆ ಆಯಾ ಪ್ರಕಾಶಗಳಲ್ಲಿ (ಜೀವಾತ್ಮ ಗಳಲ್ಲಿ) ಪರಸ್ಪರ ಸಂಬಂಧವಿಲ್ಲದಂತಾಗುವದು. (ಆದರೆ ಪ್ರತಿಬಿಂಬದ ಮೂಲಕ ಭಿನ್ನವಾಗಿ ಕಾಣುವ ಸೂರ್ಯನ ಪ್ರಕಾಶಗಳಲ್ಲಿ ಪರಸ್ಪರ ಸಂಬಂಧವಿರುವದು. ಅದೇ ರೀತಿ ಒಂದೇ ಪರಮಾತ್ಮನಿಂದ ಆವಿರ್ಭವಿಸಿದ ಜೀವಾತ್ಮಗಳಲ್ಲಿ ಪರ

ಸ್ಪರ ಸಂಬಂಧವಿದೆ, ಆದುದರಿಂದ ಅವು ಪ್ರತ್ಯೇಕವಿಲ್ಲ ಎಂದರ್ಥ ) ( ೩. ೨. ೨ ) ೯೪

( ಮೂಲ ಜೀವಾತ್ಮನಲ್ಲಿ ವಿಕೃತಿ ಆಗುವದಿಲ್ಲ ಎಂಬುದಕ್ಕೆ- )

**ನ ವಿಕಾರಿಣಸ್ತು ಕರಣವಿಕಾರಾತ್ ॥ ೩. ೨. ೩ ॥**

ಜೀವಾತ್ಮಗಳು ವಿಕಾರಕ್ಕೆ ಗುರಿಯಾಗುವುದಿಲ್ಲ. ಯಾಕಂದರೆ ಕರಣಗಳು ಮಾತ್ರ ( ಜ್ಞಾನಸಾಧನಗಳು ) ವಿಕಾರ ಹೊಂದುವವು ( ೩. ೨. ೩ ) ೯೫

( ಉಪಾಧಿಯ ( ಬುದ್ಧಿ, ಮನಸು ) ಲಯದಿಂದ ಐಕ್ಯಾನುಭವ— )

**ಅನನ್ಯಭಕ್ತ್ಯಾ ತದ್ಬುದ್ಧಿರ್ಬುದ್ಧಿಲಯಾದತ್ಯಂತಮ್ ॥ ೩. ೨. ೪ ॥**

ಅನನ್ಯ ಭಕ್ತಿಯಿಂದ ಬುದ್ಧಿಯು ಪರಮಾತ್ಮಮಯವಾಗುವದು. ಹಾಗೆ ಆಯಿತೆಂದರೆ ಪರಮಾತ್ಮನಲ್ಲಿ ಬುದ್ಧಿ ಲಯವಾಗಿ ಆತ್ಯಂತಿಕ ಐಕ್ಯಾನುಭವವಾಗುವದು ( ೩. ೨. ೪ ) ೯೬

( ಇಂಥ ಸ್ಥಿತಿ ಪ್ರಾಪ್ತವಾದರೂ ಭಕ್ತನು ಶರೀರಧಾರಿಯಾಗಿ ಉಳಿಯುವುದರಿಂದ ಅವನು ಮುಕ್ತನಲ್ಲ ಎಂದರೆ— )

**ಆಯುಶ್ಚಿರಮಿತರೇಷಾಂ ತು ಹಾನಿರನಾಸ್ಪದತ್ವಾತ್ ॥ ೩. ೨. ೫ ॥**

( ಭಕ್ತನು ಜೀವನ್ಮುಕ್ತನಾದ ಬಳಿಕ ಸಹ ) ಜೀವಂತನಾಗಿ (ಪ್ರಾರಬ್ಧದ ಮೂಲಕ) ಉಳಿದರೂ ಅವನ ಇತರ ಉಪಾಧಿಗಳು ನಷ್ಟವಾಗುವವು. ಯಾಕಂದರೆ ಅವುಗಳಿಗೆ ಆಶ್ರಯವಿಲ್ಲದಂತಾಗುವದು ( ಗೀತಾ ೪. ೩೭. ) ( ೩. ೨. ೫ ) ೯೭

( ಸಂಸೃತಿಯು ( ಜನನ ಮರಣಾದಿ ) ಕಾರಣವೇನು ಎಂಬುದಕ್ಕೆ— )

**ಸಂಸೃತಿರೇಷಾಮಭಕ್ತಿಃ ಸ್ಯಾನ್ನಾಜ್ಞಾನಾತ್ ಕಾರಣಾಸಿದ್ಧೇಃ ॥ ೩. ೨. ೬ ॥**

ಭಕ್ತಿಹೀನತೆಯೆ ಜನರ ಸಂಸಾರದ (ಜನನ ಮರಣ) ಕಾರಣವು, ಪರಮಾತ್ಮನ ಅಜ್ಞಾನವು ಕಾರಣವಲ್ಲ. ಯಾಕಂದರೆ ಹಾಗೆ ಹೇಳಲು ಪ್ರಮಾಣವಿಲ್ಲ (೩. ೨. ೬) ೯೪

(ಪರಮಾತ್ಮನ ಅಜ್ಞಾನವು ಸೃಷ್ಟಿಯ ಕಾರಣವಾಗಬಲ್ಲದು. ಆದರೆ ವ್ಯಕ್ತಿಯ ಕಾರಣವು ಅಭಕ್ತಿಯೇ ಎಂದರ್ಥ.)

(ಇನ್ನು ಜ್ಞಾನಸಾಧನಗಳಾವವು ಎಂಬುದಕ್ಕೆ—)

**ತ್ರೀಣ್ಯೇಷಾಂ ನೇತ್ರಾಣಿ ಶಬ್ದಲಿಂಗಾಕ್ಷಭೇದಾದ್ರುದ್ರವತ್ ॥ ೩. ೨. ೭ ॥**

ಮುಕ್ಕಣ್ಣನಾದ ರುದ್ರನಿಗೆ ಮೂರು ಕಣ್ಣುಗಳಿರುವಂತೆ ಜೀವಾತ್ಮರಿಗೆ (ಜ್ಞಾನ ಪಡೆಯಲು) ಶಬ್ದ, ಅನುಮಾನ, ಪ್ರತ್ಯಕ್ಷ ಎಂಬ ಭೇದದಿಂದ ಮೂರು ಕಣ್ಣುಗಳು (ಜ್ಞಾನ ಸಾಧನಗಳು) (೩. ೨. ೭) ೯೯

(ಇವುಗಳಿಗೆ ಪ್ರಮಾಣಗಳು ಎಂಬ ಹೆಸರು. ಶಬ್ದಪ್ರಮಾಣ ಅಂದರೆ ವೇದ ಇಲ್ಲವೆ ಆಪ್ತವಾಕ್ಯ. ಅನುಮಾನ ಪ್ರಮಾಣ ವೆಂದರೆ ಗೊತ್ತಿದ್ದ ಜ್ಞಾನದ ಆಧಾರದಿಂದ ಊಹಿಸುವದು. ಹೊಗೆ ಇದ್ದಲ್ಲಿ ಬೆಂಕಿ ಇರುವುದು ಎಂದು ಊಹಿಸುವಂತೆ. ಪ್ರತ್ಯಕ್ಷವೆಂದರೆ ಪಂಚೇಂದ್ರಿಯ ಹಾಗೂ ಮನಸು ಇವುಗಳ ಪ್ರತ್ಯಕ್ಷ ಅನುಭವ.)

(ಇನ್ನು ಸೃಷ್ಟಿ ಮತ್ತು ಲಯ ಇವುಗಳನ್ನು ಕುರಿತು—)

**ಆವಿಸ್ತಿರೋಭಾವಾಃ ವಿಕಾರಾಃ ಸ್ಯುಃ ಕ್ರಿಯಾಫಲಸಂಯೋಗಾತ್ ॥ ೩. ೨. ೮ ॥**

ಆವಿರ್ಭಾವ ( ಸೃಷ್ಟಿ ) ಮತ್ತು ತಿರೋಭಾವ ( ಲಯ ) ಇವು ಮೂಲ ವಸ್ತುವಿನಲ್ಲಿ ಆಗುವ ವಿಕಾರಗಳು. ಕ್ರಿಯೆ ಹಾಗೂ ಅದರ ಫಲ ಇವುಗಳ ಸಂಯೋಗದ ಮೂಲಕ ಇವು ಸಂಭವಿಸುವವು ( ೩. ೨. ೮ ) ೧೦೦

( ಅಭಾವದಿಂದ ಭಾವವು ಉಂಟಾಗಲಾರದು ( ಗೀತಾ ೨. ೧೬. ) ಎಂದರ್ಥ. )

ಇಲ್ಲಿಗೆ ಶಾಂಡಿಲ್ಯ ಸೂತ್ರಗಳು ಸಮಾಪ್ತ

## ಪರಿಶಿಷ್ಟ ೧

# ನಾರದ ಭಕ್ತಿಸೂತ್ರಗಳ ಅಕ್ಷರಾನುಕ್ರಮ

# ಭಕ್ತಿಸೂತ್ರಗಳು

# ಪರಿಶಿಷ್ಟ ೭

# ಶಾಂಡಿಲ್ಯ ಸೂತ್ರಗಳ ಅಕ್ಷರಾನುಕ್ರಮ